ಎಂ. ಫಿಲ್. ಪದವಿಯ ಸಂಪ್ರಬಂಧ

# ಬೇಂದ್ರೆ ಕಾವ್ಯದಲ್ಲಿ ಮಾತೃತ್ವದ ಸ್ವರೂಪ
# ಒಂದು ಅಧ್ಯಯನ

ಸಂಶೋಧನ ವಿದ್ಯಾರ್ಥಿ
ಎಲ್. ರೂಪಪ್ರಿಯದರ್ಶಿನಿ

ಮಾರ್ಗದರ್ಶಕರು
ಡಾ॥ ಕೆ.ಪಿ. ಭಟ್




*ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರು,*
*ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನಾ ಕೇಂದ್ರದ ಮೂಲಕ*
*ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ*
*ಸಲ್ಲಿಸಿದೆ*

***2007***

189

## ಅಭ್ಯರ್ಥಿಯ ಪ್ರಮಾಣ ಪತ್ರ

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರಿನ ಎಂ.ವಿ.ಸೀ.ಸ್ನಾತಕೋತ್ತರ ಸಂಶೋಧನ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ 2006–07 ನೇ ಸಾಲಿನ ಎಂ.ಫಿಲ್. ಪದವಿಗಾಗಿ **ಬೇಂದ್ರೆ ಕಾವ್ಯದಲ್ಲಿ ಮಾತೃತ್ವದ ಸ್ವರೂಪ – ಒಂದು ಅಧ್ಯಯನ** ಸಂಪ್ರಬಂಧವನ್ನು **ಡಾ॥ ಕೆ.ಪಿ. ಭಟ್** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಸಲ್ಲಿಸುತ್ತಿದ್ದೇನೆ.

ಈ ಸಂಪ್ರಬಂಧ ನನ್ನ ಸ್ವಂತ ಬರವಣಿಗೆಯಾಗಿದ್ದು ಇದರ ಯಾವುದೇ ಭಾಗವನ್ನು ಈವರೆಗೆ ಬೇರೆಲ್ಲೂ ಪ್ರಕಟಪಡಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ: 02-08-2007
ಸ್ಥಳ: ಬೆಂಗಳೂರು.

ಸಹಿ: ರೂಪ ಪ್ರಿಯದರ್ಶಿನಿ. ಎಲ್
ಹೆಸರು: ರೂಪ ಪ್ರಿಯದರ್ಶಿನಿ. ಎಲ್.

189

## ಮಾರ್ಗದರ್ಶಕರ ಪ್ರಮಾಣ ಪತ್ರ

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರಿನ ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ 2006–07 ನೇ ಸಾಲಿನ ಎಂ.ಫಿಲ್. ಪದವಿಗಾಗಿ **ಬೇಂದ್ರೆ ಕಾವ್ಯದಲ್ಲಿ ಮಾತೃತ್ವದ ಸ್ವರೂಪ – ಒಂದು ಅಧ್ಯಯನ** ಸಂಪ್ರಬಂಧವನ್ನು **ಎಲ್. ರೂಪಪ್ರಿಯದರ್ಶಿನಿ** ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ

ಈ ಸಂಪ್ರಬಂಧ ವಿದ್ಯಾರ್ಥಿಯ ಸ್ವಂತ ಬರವಣಿಗೆಯಾಗಿದ್ದು ಇದರ ಯಾವುದೇ ಭಾಗವನ್ನು ಈವರೆಗೆ ಬೇರೆಲ್ಲೂ ಪ್ರಕಟಪಡಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ: 02-08-07

ಸ್ಥಳ:

ಸಹಿ:

ಹೆಸರು:

## ಪರಿವಿಡಿ

## ಅಧ್ಯಯನದ ವಸ್ತು ಮತ್ತು ವ್ಯಾಪ್ತಿ

## ಅಧ್ಯಯನದ ವಸ್ತು ಮತ್ತು ವ್ಯಾಪ್ತಿ

'ಅಂಬಿಕಾತನಯದತ್ತ' ಎಂಬ ಕಾವ್ಯನಾಮದಿಂದ ದತ್ತಾತ್ರೇಯ ರಾಮಚಂದ್ರ ಬೇದ್ರೆಯವರು ಹೊಸಗನ್ನಡ ಸಾಹಿತ್ಯದಲ್ಲಿ ಪ್ರಸಿದ್ಧರಾಗಿದ್ದಾರೆ. ಕಾವ್ಯ, ನಾಟಕ, ಕಥೆ, ವಿಚಾರ-ವಿಮರ್ಶೆ, ಪತ್ರಿಕೆ, ಅನುವಾದ ಇಂತಹ ಅನೇಕ ಗಂಭೀರ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಬೇಂದ್ರೆಯವರು ಕೃಷಿ ಮಾಡಿದ್ದಾರೆ. ಕೇವಲ ಕನ್ನಡ ಭಾಷೆಗಳಲ್ಲದೇ ಇಂಗ್ಲೀಷ್ ಮತ್ತು ಮರಾಠಿ ಭಾಷೆಯಲ್ಲಿಯೂ ಕೃತಿಗಳನ್ನು ರಚಿಸಿದ್ದಾರೆ. ಇವರ ಒಟ್ಟಾರೆ ಸಾಹಿತ್ಯವನ್ನು ಗಮನಿಸಿದಾಗ ಒಂದು ಪ್ರಮುಖವಾದ ಎಳೆಯು ಬೆಸೆದು ಕೊಂಡಿರುವುದು ತಿಳಿದು ಬರುತ್ತದೆ. ಅಂದರೆ ಬೇಂದ್ರೆಯವರ ಸಾಹಿತ್ಯದಲ್ಲಿ ಮಾತೃತ್ವದ ಭಾವನೆಯು ಎಳೆ ಎಳೆಯಾಗಿ ಹರಡಿಕೊಂಡಿರುವುದನ್ನು ನಾವು ಸೂಕ್ಷ್ಮವಾಗಿ ಗಮನಿಸಿದರೆ ತಿಳಿಯಬಹುದಾಗಿದೆ. [ಬೇಂದ್ರೆ ಕಾವ್ಯದಲ್ಲಿ ಈ ಮಾತೃತ್ವದ ಸ್ವರೂಪವು ಹೇಗೆ ಹಂಚಿಹೋಗಿದೆ ಎಂಬುದು ಈ ಅಧ್ಯಯನದ ವಸ್ತುವಾಗಿದೆ.]

ಬೇಂದ್ರೆಯವರ ವ್ಯಕ್ತಿತ್ವವನ್ನು ಅಜ್ಜಿ ಗೋದುಬಾಯಿ ಮತ್ತು ತಾಯಿ ಅಂಬಾಬಾಯಿಯವರು ರೂಪಿಸಿದರು. ತಂದೆಯ ಗೈರು ಹಾಜರಿಯಲ್ಲಿ ಅವರ ಸ್ಥಾನದಲ್ಲಿ ತಾಯಿ ನಿಂತು ತನ್ನ ಮಗನ ಉನ್ನತವಾದ ಭವಿಷ್ಯಕ್ಕಾಗಿ ತನ್ನ ಇಡೀ ಜೀವನವನ್ನು ಮುಡಿಪಾಗಿಟ್ಟಳು. ಇಂಥ ತಾಯಿಯ ಪ್ರೀತಿ, ವಾತ್ಸಲ್ಯ ಚಿಕ್ಕ ವಯಸ್ಸಿನಲ್ಲಿಯೇ ಬೇಂದ್ರೆಯವರ ಮನಸ್ಸಿನ ಮೇಲೆ ಪ್ರಭಾವವನ್ನು ಬೀರಿತು. ಮುಂದೆ ಇದೇ ಪ್ರಭಾವವು ಭೂಮಿ, ಭರತ ಭೂಮಿ, ಕನ್ನಡ ಭೂಮಿಯಂತಹ ಜಡ ವಸ್ತುಗಳಲ್ಲೂ ಹರಿದು ಬಂದು ಅವು ಚೇತನ್ಯ ಸ್ವರೂಪಿಯಾಗಿದ್ದು ಮಾತ್ರವಲ್ಲದೆ ಮಾತೃ ಸ್ವರೂಪಿಯೂ ಆಯಿತು. ಇಷ್ಟೇ ಅಲ್ಲದೇ ಅರವಿಂದಾಶ್ರಮದ 'ಮದರ್' ನನ್ನು ಇದೇ ಮಾತೃ ದೃಷ್ಟಿಯಲ್ಲಿ ಬೇಂದ್ರೆ ನೋಡಿ ಆಕೆಯನ್ನು ಆಧ್ಯಾತ್ಮ ಮಾತೆಯನ್ನಾಗಿಸಿದರು. ಹೀಗೆ [ಬೇಂದ್ರೆಯವರ ಕಾವ್ಯದಲ್ಲಿ ಮೂಡಿ ಬಂದ ಭೂಮಿತಾಯಿ ಭರತಮಾತೆ, ಕನ್ನಡ ಮಾತೆ, ಆಧ್ಯಾತ್ಮ ಮಾತೆಯರನ್ನು ಕುರಿತು ಇಲ್ಲಿ ಬೇರೆ ಅಧ್ಯಾಯಗಳಲ್ಲಿ ಚರ್ಚಿಸಲಾಗಿದೆ.]

ಬೇಂದ್ರೆಯವರನ್ನು ರೂಪಿಸಿದ ಮಹಾನ್ ಶಕ್ತಿಗಳು ಎಂಬ ಅಧ್ಯಾಯದಲ್ಲಿ ಬೇಂದ್ರೆಯವರ ವ್ಯಕ್ತಿತ್ವ ನಿರ್ಮಾಣದಲ್ಲಿ ಸಹಾಯ ಮಾಡಿದ ಅಜ್ಜಿ ಗೋದುಬಾಯಿ, ತಾಯಿ ಅಂಬಾಬಾಯಿ, ಪಾಂಡಿಚೆರಿಯ ಅರವಿಂದಾಶ್ರಮದ ಅರವಿಂದರು ಮತ್ತು ಶ್ರೀಮಾತೆಯವರ ಪಾತ್ರವನ್ನು ಚರ್ಚಿಸಲಾಗಿದೆ. ಇಲ್ಲಿ ಒಟ್ಟಾಗಿ ಬೇಂದ್ರಯವರ ಕಾವ್ಯದಲ್ಲಿ ಮಾತೃ ಪ್ರತಿಮೆ ರೂಪುಗೊಳ್ಳುವುದಕ್ಕೆ ಪ್ರಭಾವಿಸಿರುವ ಸಂಗತಿಗಳ ಕಡೆ ಹೆಚ್ಚು ಗಮನವನ್ನು ನೀಡಲಾಗಿದೆ.

'ಅಂಬಿಕಾತನಯದತ್ತರ ತಾಯಿ ಅಂಬಿಕೆ' ಎಂಬ ಅಧ್ಯಾಯದಲ್ಲಿ ಬೇಂದ್ರೆಯವರ ಕಾವ್ಯದಲ್ಲಿ ಮೂಡಿ ಬಂದಿರುವ ಅಂಬಿಕೆಯ ಚಿತ್ರದ ಮೂಲಕ ಬೇಂದ್ರೆಯವರ ತಾಯಿಯ ವ್ಯಕ್ತಿತ್ವವನ್ನು ಗ್ರಹಿಸುವ ಪ್ರಯತ್ನ ಮಾಡಲಾಗಿದೆ.

ಜೊತೆಗೆ ಜಿ.ಎಸ್. ಶಿವರುದ್ರಪ್ಪ, ಪಿ. ಲಂಕೇಶ್ ಕವಿಗಳು ಚಿತ್ರಿಸಿರುವ ತಾಯಿಯನ್ನು ಕುರಿತ ಕವನಗಳೊಂದಿಗೆ ಬೇಂದ್ರೆಯವರ ಅಂಬಿಕೆಯನ್ನು ನೋಡಲಾಗಿದೆ.

'ಬೇಂದ್ರೆಯವರ ಕಾವ್ಯದಲ್ಲಿ ಭೂಮಿತಾಯಿ' ಎಂಬ ಅಧ್ಯಾಯದಲ್ಲಿ ಬೇಂದ್ರೆಯವರು ಕಂಡ ಭೂಮಿಯನ್ನು ಕುರಿತು ಚರ್ಚಿಸಲಾಗಿದೆ. ಕುವೆಂಪು, ಕೆ. ಎಸ್. ನರಸಿಂಹಸ್ವಾಮಿ, ಮಧುರ ಚೆನ್ನ, ಗೋಪಾಲ ಕೃಷ್ಣ ಅಡಿಗರಂತಹ ಪ್ರಮುಖ ಕವಿಗಳು ಕಂಡ ಭೂಮಿಗಳಿಗಿಂತ ಬೇಂದ್ರೆಯವರ ಕಾವ್ಯದಲ್ಲಿ ಮೂಡಿ ಬಂದ ಭೂಮಿ ಹೇಗೆ ಭಿನ್ನ ಎಂಬುದನ್ನು ತೋರಿಸಲಾಗಿದೆ.

'ಬೇಂದ್ರೆಯವರ ಕಾವ್ಯದಲ್ಲಿ ಭಾರತಮಾತೆ' ಎಂಬ ಅಧ್ಯಾಯದಲ್ಲಿ ವಸಾಹತುಶಾಹಿ ಪ್ರಕ್ರಿಯೆಗೆ ಬೇಂದ್ರೆಯವರು ಸ್ಪಂದಿಸಿದ ರೀತಿಯನ್ನು ಕುರಿತು ಅಧ್ಯಯನ ಮಾಡಲಾಗಿದೆ. ಇವರ ಸಮಕಾಲೀನರಾದ ಕುವೆಂಪುರವರ ಪ್ರತಿಕ್ರಿಯೆಯನ್ನು ಸಹ ಇಲ್ಲಿ ಗಮನಿಸಲಾಗಿದೆ.

'ಬೇಂದ್ರೆ ಕಾವ್ಯದಲ್ಲಿ ಶ್ರೀಮಾತೆ' ಎಂಬ ಅಧ್ಯಾಯದಲ್ಲಿ ಬೇಂದ್ರೆ ಪಾಂಡಿಚೆರಿಯ 'ಮದರ್' ನನ್ನು ಕಂಡ ಬಗೆಯನ್ನು ಚರ್ಚಿಸಲಾಗಿದೆ. ಪಾಂಡಿಚೆರಿಯ ಮದರ್ ನನ್ನು ಆಧ್ಯಾತ್ಮಮಾತೆಯಾಗಿ ಬೇಂದ್ರೆ ಕಂಡ ಬಗೆಯನ್ನು ಇಲ್ಲಿ ಕಂಡಿರಿಸಲಾಗಿದೆ.

ಬೇಂದ್ರೆಯವರು ವಿಶ್ವಮಾತೆ, ಭೂಮಿತಾಯಿ, ಭರತಮಾತೆ, ಕನ್ನಡತಾಯಿ, ತಾಯಿ ಅಂಬಿಕೆ ಹೀಗೆ ಐದು ಐದೆಯರ ಮಗನೆಂದು ತಮ್ಮನ್ನು ಕರೆದುಕೊಂಡಿದ್ದಾರೆ. ಈ ಅಧ್ಯಯನದಲ್ಲಿ ವಿಶ್ವಮಾತೆಯನ್ನು ಬಿಟ್ಟು ಉಳಿದ ಎಲ್ಲ ಮಾತೆಯರ ಅಧ್ಯಯನವನ್ನು ಮಾಡಲಾಗಿದೆ. ವಿಶ್ವಮಾತೆಯ ಪ್ರಸ್ತಾಪವು ಭರತಮಾತೆಯ ಪ್ರಸ್ತಾಪದೊಂದಿಗೆ ಅಲ್ಲಲ್ಲಿ ಬರುತ್ತದೆ. ಅಲ್ಲದೆ ವಿಶ್ವಮಾತೆಯನ್ನೇ ಕುರಿತ ಬೇಂದ್ರೆಯವರ ಕವನಗಳು ವಿರಳ. ಆದ್ದರಿಂದ ಅವನ್ನು ಒಂದು ಅಧ್ಯಾಯದಲ್ಲಿ ಚರ್ಚಿಸಲು ಸಾಧ್ಯವಿಲ್ಲ. ಇದರಿಂದ ವಿಶ್ವಮಾತೆಯನ್ನು ಇಲ್ಲಿ ಕೈ ಬಿಡಲಾಗಿದೆ.

(ಈ ಪ್ರಬಂಧವು ಬೇಂದ್ರೆಯವರ ಕಾವ್ಯದಲ್ಲಿ ಮೂಡಿ ಬಂದಿರುವ ಮಾತೃತ್ವದ ಪ್ರತಿಮೆಗಳನ್ನು ಅಧ್ಯಯನ ಮಾಡುತ್ತದೆ. ಅಧ್ಯಾಯಗಳಲ್ಲಿ ಬೇರೆ ಕವಿಗಳ ವಿಷಯ ಬಂದರೂ ಇದು ಸಮಗ್ರವಾದ ತೌಲನಿಕ ಅಧ್ಯಯನವಲ್ಲ. ಬದಲಿಗೆ ನನ್ನ [ಈ ಅಧ್ಯಯನ ಮಿತಿಯಲ್ಲಿ ಬೇಂದ್ರೆಯವರು ಉಳಿದ ಕವಿಗಳಿಗಿಂತ ಹೇಗೆ ಭಿನ್ನರಾಗಿ ಉಳಿಯುತ್ತಾರೆ ಮತ್ತು ಅವರ ಕವಿಧ್ವನಿ ಹೇಗೆ ಬೇರೆ ಕವಿಗಳ ಧ್ವನಿಗಳಿಗಿಂತ ಭಿನ್ನವಾಗುತ್ತದೆ ಎಂಬುದನ್ನು ಇಲ್ಲಿ ಹೇಳಲಾಗಿದೆ.]

ತಮ್ಮ ಪ್ರಾದೇಶಿಕ ಕನ್ನಡದ ಲಯದ ಮೋಡಿಯಿಂದ ಸಾಹಿತ್ಯಲೋಕದಲ್ಲಿ ತಮ್ಮದೇ ಆದ ನಾದ ಮೂಡಿಸಿದೆ. ನಾದಲೀಲೆಯ ಮೋಡಿಕಾರ ಬೇಂದ್ರೆ, ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ತಮ್ಮ ವಿಶಿಷ್ಟ ಛಾಪನ್ನು ಮೂಡಿಸಿರುವ ಬೇಂದ್ರೆ ಅಧ್ಯಯನಾಸಕ್ತರಿಗೆ ಒಳ್ಳೆಯ ವಿಷಯಗಳನ್ನು ನೀಡುವ ಗಣಿಯಾಗಿದ್ದಾರೆ. ಇಂತಹ ಕವಿ ಬೇಂದ್ರೆಯವರನ್ನು ಕೇವಲ ಪ್ರಬಂಧದ ವ್ಯಾಪ್ತಿಗೆ ಇಳಿಸುವುದು ಅಷ್ಟು

ಉಚಿತವಲ್ಲ. ಹಾಗೆಯೇ ಪ್ರಬಂಧದ ವ್ಯಾಪ್ತಿಯಲ್ಲಿ ಬೇಂದ್ರೆಯವರನ್ನು ಇಡಿಯಾಗಿ ನೋಡುವುದು ಸಹ ಸಾಧ್ಯವಿಲ್ಲ.

ಆದರೂ ಕನ್ನಡ ಸಾಹಿತ್ಯದ ಗಟ್ಟಿ ಕವಿಯೊಬ್ಬರನ್ನು ನನ್ನ ಅಧ್ಯಯನದ ವಸ್ತುವನ್ನಾಗಿಸಿರುವುದರಲ್ಲಿ ನನಗೆ ಸಂತೋಷವೆನಿಸಿದೆ. ಆ ಮೂಲಕ ಇಲ್ಲಿ ಬೇಂದ್ರೆಯವರ ಸಾಹಿತ್ಯವನ್ನು ಇನ್ನೂ ಅರಿತು ಕೊಳ್ಳುವುದಕ್ಕೆ ನಾನು ಪ್ರಯತ್ನ ಪಟ್ಟಿದ್ದೇನೆ.

# ಅಧ್ಯಾಯ ಒಂದು

## ಬೇಂದ್ರೆಯವರನ್ನು ರೂಪಿಸಿದ ಮಹಾನ್ ಶಕ್ತಿಗಳು

'ವರಕವಿ' , 'ಶಬ್ದಗಾರುಡಿಗ', 'ಶ್ರಾವಣದ ಕವಿ' ಮೊದಲಾದ ಹೊಗಳಿಕೆಗೆ ಪಾತ್ರರಾದ ಕವಿ ದತ್ತಾತ್ರೇಯ ರಾಮಚಂದ್ರ ಬೇಂದ್ರೆ. 'ಆಡು ಮುಟ್ಟದ ಸೊಪ್ಪಿಲ್ಲ' ಎಂಬಂತೆ ಕವಿತೆ, ಕಾವ್ಯ ಚಿಂತನ, ಸಾಹಿತ್ಯ, ವಿಮರ್ಶೆ, ನಾಟಕ, ಅನುವಾದ ಹೀಗೆ ಹತ್ತು ಹಲವು ಸಾಹಿತ್ಯ ಪ್ರಕಾರಗಳಲ್ಲಿ ಬೇಂದ್ರೆ ತಮ್ಮದೇ ಆದ ಛಾಪನ್ನು ಮೂಡಿಸಿದ್ದಾರೆ. ಬೇಂದ್ರೆ ಎಂದಾಕ್ಷಣ ಸಹೃದಯರಿಗೆ ನೆನಪಿಗೆ ಬರುವುದು ಅವರ ಕವಿತೆಗಳು. ಧಾರವಾಡ ಕನ್ನಡವನ್ನು ತನ್ನ ಕವಿತೆಗಳಲ್ಲಿ ತರುವ ಮೂಲಕ ಕನ್ನಡ ಸಾಹಿತ್ಯ ಲೋಕದಲ್ಲಿ ಪ್ರಾದೇಶಿಕ ಕನ್ನಡಕ್ಕೆ ಗಟ್ಟಿ ಸ್ಥಾನವನ್ನು ಬೇಂದ್ರೆಯವರು ಕಟ್ಟಿ ಕೊಟ್ಟರು.

'ನಾಕುತಂತಿ' ಕವನ ಸಂಕಲನ ಕನ್ನಡಕ್ಕೆ ಎರಡನೇ ಜ್ಞಾನಪೀಠ ಪ್ರಶಸ್ತಿಯನ್ನು ತಂದು ಕೊಟ್ಟ ಬೇಂದ್ರೆಯವರು 1896 ಜನವರಿ 31 ರಂದು ಧಾರವಾಡದಲ್ಲಿಜನಿಸಿದರು. ಬೇಂದೆಯವರ ತಂದೆ ರಾಮಚಂದ್ರ ಮತ್ತು ತಾಯಿ ಅಂಬಾಬಾಯಿ. ಬೇಂದ್ರೆಯವರ ಮನೆತನವು ವೈದಿಕ ಮನೆತನವಾಗಿದ್ದು, ಜೊತೆಗೆ ವಿದ್ಯಾವಂತ ಮನೆತನವಾಗಿತ್ತು. ಇವರ ತಾತ ಅಪ್ಪಾಭಟ್ಟರು ಆ ಕಾಲಕ್ಕೆ 'ದಶಗ್ರಂಥಿ'ಗಳೆಂದು ಹೆಸರುಮಾಡಿದ್ದರು. ಜೊತೆಗೆ 'ಛಂದೋದಾಹರಣ' ಎಂಬ ಪ್ರಬಂಧವನ್ನು 'ಪಾರ್ವತೀ ಪರಿಣಯ' ಎಂಬ ಕೀರ್ತನೆಯನ್ನು ಬರೆದಿದ್ದರು. ಬೇಂದ್ರೆಯವರ ತಂದೆ ರಾಮಚಂದ್ರರು ಕೂಡ ಪ್ರಾಥಮಿಕ ಶಾಲೆಯ ಶಿಕ್ಷಕರಾಗಿ ಸೇವೆ ಸಲ್ಲಿಸುತ್ತಿದ್ದರು. ಇಂಥ ವಿದ್ಯಾವಂತ ಮನೆತನದ ಹಿನ್ನೆಲೆಯಿಂದ ಬೇಂದ್ರೆಯವರು ಬಂದಿದ್ದರಿಂದ ಸಹಜವಾಗಿಯೇ ಸರಸ್ವತಿ ಬೇಂದ್ರೆಯವರಿಗೆ ಒಲಿದು ಬಂದಿದ್ದಳು.

ಬೇಂದ್ರೆಯವರ ತಂದೆ ಗಂಡಮಾಲೆ ರೋಗದಿಂದ ನರಳುತ್ತಿದ್ದ ಕಾರಣ ಇಡೀ ಮನೆಯ ಜವಬ್ದಾರಿಯನ್ನು ಅವರ ಅಜ್ಜಿ ಗೋದು ಬಾಯಿಯವರೇ ವಹಿಸಿಕೊಂಡಿದ್ದರು. ಆಕೆ ಬೇಂದ್ರೆಯವರ ತಾಯಿ ಅಂಬಾಬಾಯಿಯವರ ಜೊತೆಗೂಡಿ ಒಂದು ಖಾನಾವಳಿಯನ್ನು ಧಾರವಾಡದ ಕಾಮನ ಕಟ್ಟೆಯಲ್ಲಿ ತೆರೆದರು. ಆ ಕಾಲಕ್ಕೆ ಹೆಣ್ಣೊಬ್ಬಳು ಖಾನಾವಳಿಯನ್ನು ತೆರೆದಳೆಂದರೆ ಅವಳ ಗಟ್ಟಿತನವನ್ನು ನಾವು ಈ ಮೂಲಕ ಗುರ್ತಿಸಬಹುದಾಗಿದೆ. ಈ ಖಾನಾವಳಿಯಿಂದ ಬರುವ ಆದಾಯದಿಂದ ಆಕೆ ಇಡೀ ಸಂಸಾರವನ್ನು ನಡೆಸುತ್ತಿದ್ದರು. ಈ ಖಾನಾವಳಿಗೆ ದೇಶಭಕ್ತರು, ಶಿಕ್ಷಕರು, ಬ್ರಹ್ಮ ಚೈತನ್ಯದ ಭಕ್ತರು ಬರುತ್ತಿದ್ದರು. ಆ ಖಾನಾವಳಿ ಕೇವಲ ಊಟದ ಮನೆಯಾಗಿರದೆ, ವಿಚಾರ ಮತ್ತು ಚರ್ಚೆಯ ಸ್ಥಾನವಾಗಿತ್ತು. ಆಗ ಸ್ವಾತಂತ್ರ್ಯ ಚಳುವಳಿಯ ಸಂದರ್ಭ. ಖಾನಾವಳಿಗೆ ಬರುತ್ತಿದ್ದ ವಿಚಾರವಂತರು ಈ ವಿಷಯದ ಬಗ್ಗೆ ಅನೇಕ ಚರ್ಚೆಗಳನ್ನು ಮಾಡುತ್ತಿದ್ದರು. ಇದು ಬಾಲಕನಾದ ಬೇಂದ್ರೆಯವರಲ್ಲಿ ಹೊಸ ವಿಚಾರ ಮೂಡಲು ಸಹಾಯವಾಗುತ್ತಿತ್ತು. ಆ ಪುಟ್ಟ ಮನಸ್ಸಿಗೆ ದೇಶದ ವಿಚಾರಗಳು ತಿಳಿಯುತ್ತಿದುದ್ದೇ ಈ ಖಾನಾವಳಿಯಿಂದ. ಜೀವನದ ಕಷ್ಟಗಳಿಗೆ

ಎದೆಗುಂದದೆ ಗೋದುಬಾಯಿ ಧೈರ್ಯದಿಂದ ಉತ್ತರ ನೀಡಿದರು. ಆದ್ದರಿಂದ ಸ್ವತಃ ಬೇಂದ್ರೆಯವರೇ ತಮ್ಮ ಅಜ್ಜಿಯನ್ನು ಹುಲಿಯಂಥವಳು ಎಂದು ಕರೆದಿದ್ದಾರೆ. ಹುಲಿಯಂತಹ ಕೆಚ್ಚು ಧೈರ್ಯದ ಜೊತೆಗೆ ಆಕೆಯಲ್ಲಿ ಮಾತೃ ಹೃದಯವು ಸದಾ ಜಾಗೃತವಾಗಿತ್ತು. ಈಕೆ ತನ್ನ ಬದುಕಿನ ಎಲ್ಲಾ ಕಷ್ಟಗಳನ್ನು ಎದುರಿಗಿದ್ದ ಮೊಮ್ಮಗನನ್ನು ನೋಡಿ ಮರೆಯುತ್ತಿದ್ದಳು. "ಅಜ್ಜಿಯ ಪೋಷಣೆಯಲ್ಲಿ ಬೆಳೆದವನಾದರೂ ನಾನು ನಿಜವಾದ ಬಡತನವನ್ನು ಅನುಭವಿಸಲಿಲ್ಲ. ನನ್ನ ಅಜ್ಜಿ ಬಡವಿ, ಜನರ ಮನೆಯಲ್ಲಿ ಅಡಿಗೆಗೆ ಹೋಗುತ್ತಿದ್ದರೂ ಕಟ್ಟಾಭಿಮಾನಿ ಯಾರಿಗೂ ದೇಹಿ ಎಂದವಳಲ್ಲ. ನಮ್ಮದೂ ಅದೇ ಹಾದಿ"[1] ಎಂದು ಬೇಂದ್ರೆಯವರೇ ತಮ್ಮ ಅಜ್ಜಿಯ ವ್ಯಕ್ತಿತ್ವವನ್ನು ಕಟ್ಟಿಕೊಟ್ಟಿದ್ದಾರೆ. ಹೀಗೆ ಬೇಂದ್ರೆಯವರಲ್ಲಿ ಶಿಸ್ತು, ಶ್ರದ್ಧೆ ಕರ್ತವ್ಯ ಬದ್ಧತೆ ಮೊದಲಾದ ಒಳ್ಳೆಯ ಗುಣಗಳನ್ನು ತುಂಬಿ ಅವರನ್ನು ಪರಿಪೂರ್ಣ ಮನುಷ್ಯರನ್ನಾಗಿಸುವಲ್ಲಿ ಗೋದುಬಾಯಿಯವರ ಪಾತ್ರ ತುಂಬಾ ಹಿರಿಯದ್ದಾಗಿದೆ. ಇಂತಹ ಅಜ್ಜಿ ಗೋದುಬಾಯಿಯನ್ನು ಬೇಂದ್ರೆ ತಮ್ಮ ಕವನಗಳ ಸಂದರ್ಭಗಳಲ್ಲಿ ಸ್ಮರಿಸುತ್ತಾರೆ. ಆ ಮೂಲಕ ಬೇಂದ್ರೆ ಅಜ್ಜಿಗೆ ಕೃತಜ್ಞತೆಯನ್ನು ಸಲ್ಲಿಸಿದ್ದಾರೆ.

ಬೇಂದ್ರೆಯವರ ತಾಯಿಯಾದ ಅಂಬಾಬಾಯಿಯವರು ರಾಮನ ಭಕ್ತರಾಗಿದ್ದರು. ಆಕೆಗೆ ಕನ್ನಡ ಮತ್ತು ಮರಾಠಿ ಈ ಎರಡೂ ಭಾಷೆಗಳ ಪರಿಚಯ ಚೆನ್ನಾಗಿತ್ತು. ಮನೆಯಲ್ಲಿ ಈ ಎರಡೂ ಭಾಷೆಗಳ ಭಕ್ತಿಗೀತೆಗಳನ್ನು ಆಕೆ ಹಾಡುತ್ತಿದ್ದರು. ಪತಿಯ ಅನಾರೋಗ್ಯದಿಂದ ಅಸಹಾಯಕಳಾದ ಆಕೆ ಕಷ್ಟ ಸಹಿಷ್ಣುಳಾಗಿದ್ದರು. ತಾಯಿಯ ದೈವಭಕ್ತಿ ಮತ್ತು ಕಷ್ಟ ಸಹಿಷ್ಣುತೆಗಳೆಲ್ಲವು ಬೇಂದ್ರೆಯ ಮನಸ್ಸಿಗೆ ಪ್ರಭಾವವನ್ನುಂಟು ಮಾಡಿತು. ಬೇಂದ್ರೆಯವರ ಪಾಲಿಗೆ ಅವರ ತಾಯಿ ಸ್ಫೂರ್ತಿಯ ಸೆಲೆಯೇ ಆಗಿದ್ದರು. ತಾಯಿಯ ಅಗಾಧವಾದ ಪ್ರಭಾವದಿಂದಲೇ ಬೇಂದ್ರೆ ತಮ್ಮ ಕಾವ್ಯನಾಮವನ್ನು 'ಅಂಬಿಕಾತನಯದತ್ತ' ಎಂದು ಇಟ್ಟುಕೊಂಡಿದ್ದರು. ಬಹುಶಃ ಬೇಂದ್ರೆ ತಮ್ಮ ಕಾವ್ಯನಾಮದಿಂದಾಗಿ ಅನೇಕ ಸಂಪ್ರದಾಯಸ್ಥರ ಕೆಂಗಣ್ಣಿಗೆ ಗುರಿಯಾಗಿರಬಹುದು. ಸಾಮಾನ್ಯವಾಗಿ ಆ ಕಾಲದ ಯಾವ ಕವಿಯೂ ತನ್ನ ಕಾವ್ಯನಾಮವನ್ನು ತಾಯಿಯ ಹೆಸರಿನಲ್ಲಿ ಇಟ್ಟುಕೊಂಡಿರಲಿಲ್ಲ, ಇದಕ್ಕೆ ಸಂಪ್ರದಾಯಸ್ಥರ ವಿರೋಧವಿದ್ದು ಅವರು ಬೇಂದ್ರೆಯವರನ್ನು ಈ ವಿಷಯದ ಸಲುವಾಗಿ ಪ್ರಶ್ನಿಸಿರಬಹುದು. ಅದಕ್ಕೆ ಉತ್ತರವೆಂಬಂತೆ ಬೇಂದ್ರೆ ತಮ್ಮದೊಂದು ಕವನವನ್ನೇ ರಚಿಸಿದ್ದಾರೆ.

*'ಸಾವಿರದ ಮನೆಗಳಲ್ಲಿ ನನಗೆ ಮನೆಯ ಮಾಡಿದೆ*

*ತಾಯಿ ಆಟ ಹೂಡಿದೆ.*

*ನಿನ್ನ ಹೆಸರಿನಲ್ಲಿ ನಾನು ಬರೆವುದೇನು ಸೋಜಿಗ*

*ತಿಳಿಯಲಾರದೀ ಜಗ*[2]

*(ಅಂಬಿಕಾತನಯದತ್ತ)*

ಬೇಂದ್ರೆಯ ಪಾಲಿಗೆ ಅಂಬಾಬಾಯಿ ದೇವತೆಯೇ ಆಗಿದ್ದರು. ಅವರಿಗಾಗಿಯೇ ಅನೇಕ ಕವನಗಳನ್ನು ಕವಿ ಬೇಂದ್ರೆ ರಚಿಸಿದ್ದಾರೆ. ಓದುಗರಿಗೆ ಆ ಮೂಲಕ ಬೇಂದ್ರೆ ತಮ್ಮ ತಾಯಿಯ ಅದ್ಭುತವಾದ ವ್ಯಕ್ತಿತ್ವದ ಅನಾವರಣವನ್ನು ಮಾಡಿಕೊಟ್ಟಿದ್ದಾರೆ. ಹೆತ್ತ ತಾಯಿಯನ್ನು ತಮ್ಮ ಅನೇಕ ಕವನಗಳ ವಸ್ತುವನ್ನಾಗಿಸಿರುವ ಕೆಲಸವನ್ನು ಮೊಟ್ಟ ಮೊದಲ ಬಾರಿಗೆ ಕವಿಬೇಂದ್ರೆ ಮಾಡಿದ್ದಾರೆ. ಬೇಂದ್ರೆ ತಾಯಿಯ ಸ್ಫೂರ್ತಿಯಿಂದಲೇ ಕವಿಯಾದದ್ದು. ನಂತರ ಬೇಂದ್ರೆಯವರ ಇತರ ಕವಿತೆಗಳಲ್ಲಿ ಈ ತಾಯಿಯ ಸ್ಪರ್ಶವು ಭೂಮಿ, ವಿಶ್ವ ಹೀಗೆ ಇಲ್ಲಾ ಕಡೆಗಳಲ್ಲೂ ಹರಡಿ ನಿಂತಿವೆ.

ಬೇಂದ್ರೆ ಎಂಬ ಮಣ್ಣಿಗೆ ಅಜ್ಜಿ ಗೋದು ಬಾಯಿ ಮತ್ತು ತಾಯಿ ಅಂಬಾಬಾಯಿ ಎಂಬ ಎರಡು ಶಕ್ತಿಗಳು ಸ್ಪಷ್ಟವಾದ ಆಕಾರ ರೂಪವನ್ನು ಕೊಟ್ಟು ಒಂದು ಸುಂದರವಾದ ಮೂರ್ತಿಯನ್ನಾಗಿಸಿದರು. ಸ್ತ್ರೀ ಪೋಷಿತ ಬಾಲ್ಯ ಇವರದ್ದಾಗಿದ್ದರಿಂದ ಇವರಿಗೆ ಒರಟುತನ, ಕಠಿಣತೆಗಳು ಬರಲಿಲ್ಲ. ಬದಲಿಗೆ ಮಾತೃ ಹೃದಯದ ಗುಣಗಳು ಇವರಲ್ಲಿ ಮನೆ ಮಾಡಿದ್ದವು. ಆದ್ದರಿಂದಲೇ ಇವರ ಬಹು ಪಾಲು ಬರವಣಿಗೆಯಲ್ಲೂ ಮಾತೃ ಹೃದಯದ ಪ್ರತಿಬಿಂಬವನ್ನೇ ನಾವು ಕಾಣುತ್ತೇವೆ. ವ್ಯಕ್ತಿಯ ಜೀವನದಲ್ಲಿ ಅವನು ಕಳೆದ ಬಾಲ್ಯದ ಪರಿಸರವು ತುಂಬಾ ಮುಖ್ಯವಾದದ್ದು. ಅದು ಅವನನ್ನು ಜೀವನದ ಉದ್ದಕ್ಕೂ ಕೈ ಹಿಡಿದು ನಡೆಸುತ್ತದೆ. ಇಬ್ಬರು ದಿಟ್ಟ ಹೆಂಗಸರ ಕೈಯಲ್ಲಿ ಬಾಲ್ಯದ ಜೀವನ ಕಳೆದ ಬೇಂದ್ರೆ ತಮ್ಮ ಕಾವ್ಯದಲ್ಲಿ ಮಾತೃತ್ವದ ಅಂಶಕ್ಕೆ ಹೆಚ್ಚು ಒತ್ತನ್ನು ನೀಡಿದುದರಲ್ಲಿ ಯಾವುದೇ ಅತಿಶಯೋಕ್ತಿ ಇಲ್ಲ. "ತಂದೆಯ ಅವನ ಬಳಗದ ನಿಕಟ ಸಾನಿಧ್ಯದಿಂದ ದೈವ ವಂಚಿತನಾದ ನಾನು ನನ್ನ ತಾಯಿ, ತಾಯಿಯ ತಾಯಿ ಇವರ ಪ್ರತ್ಯಕ್ಷ ಚಾರಿತ್ರ್ಯದಲ್ಲಿ ಪೌರುಷವನ್ನು ಕಂಡೆ"[3] ಎಂದು ಬೇಂದ್ರೆಯವರೇ ಹೇಳಿಕೊಂಡಿದ್ದಾರೆ. ಒಟ್ಟಾರೆ ಬೇಂದ್ರೆಯವರ ತಾಯಿ ಅಂಬಾಬಾಯಿ ಬೇಂದ್ರೆಯವರ ಕುರಿತಾದ ಶಕ್ತಿ ತಮ್ಮ ನರನಾಡಿಗಳಲ್ಲಿ ಹರಿಯುತ್ತಿರುವ ಆ ತಾಯಿಯನ್ನು ಬೇಂದ್ರೆ ತಮ್ಮ ಬರವಣಿಗೆಯಲ್ಲಿಯೂ ತರುವ ಪ್ರಯತ್ನವನ್ನು ಮಾಡಿದರು. ಆದ್ದರಿಂದಲೇ ಬೇಂದೆಯವರು ತಾಯಿಯನ್ನು ಕುರಿತಾದ ಸರಳ ಕವನದಿಂದ ಹಿಡಿದು ಗಂಭೀರವಾಗಿ ಚಿಂತನೆಗೆ ಹಚ್ಚಿಸುವವರೆಗೂ 'ತಾಯಿ'ಯನ್ನು ವಿಸ್ತರಿಸುತ್ತಾರೆ.

"ಪ್ರಾಚೀನ ಪ್ರತಿಮೆಗಳು ಅನುವಂಶಿಕ ಚಿಂತನ ರೂಪಗಳು ಇವು ಕ್ರಿಯಾ ಸಾಧ್ಯತೆಯನ್ನು ಪ್ರತಿ ಬಿಂಬಿಸುವುದೇ ವಿನಾ ಕ್ರಿಯೆಯನ್ನಲ್ಲ. ವರ್ತನೆಗಳಿಗೆ ಇವು ಗಣನೀಯ ಪ್ರಮಾಣದಲ್ಲಿ ಪ್ರೇರಕಗಳಾದರೂ ಇವುಗಳ ನೇರವಾದ ಅರಿವು ಅಸಾಧ್ಯ"[4] ಎಂದು ಪ್ರಸಿದ್ಧ ಮನೋವಿಜ್ಞಾನಿ ಯೂಂಗ್ ಅಭಿಪ್ರಾಯ ಪಡುತ್ತಾನೆ. ಒಬ್ಬ ಕವಿ ಒಂದು ಪ್ರತಿಮೆಯನ್ನು ಮತ್ತೆ ಮತ್ತೆ ಬಳಸುವುದಕ್ಕೆ ಯೂಂಗ್ ಕಾರಣವನ್ನು ತಿಳಿಸುತ್ತಾನೆ. ಅವನೇ ಹೇಳುವಂತೆ 'ಮಾತೃ' ವಿನ ಕಲ್ಪನೆ ಪ್ರಾಚೀನವಾದ ಪ್ರತಿಮೆ. ಪರಂಪರೆಯಿಂದ ಬಂದ ಈ ತೀಪ್ರವಾದ ಅನುಭವವವೇ ಈ ರೀತಿಯ ಪ್ರತಿಮೆಗಳ ಹುಟ್ಟಿಗೆ ಕಾರಣ ಎಂದು ಯೂಂಗ್ ಅಭಿಪ್ರಾಯಪಡುತ್ತಾನೆ. ಕವಿಯ ಬಾಲ್ಯವನ್ನು ರೂಪಿಸಿರುವ ಪರಿಸರ ಮತ್ತು ಪರಂಪರೆಗಳ ತೀವ್ರವಾದ ಅನುಭವದಿಂದಾಗಿ ಇಂತಹ ಪ್ರತಿಮೆಗಳನ್ನು ಆತ ಮತ್ತೆ ಮತ್ತೆ ಬಳಸುವಂತೆ ಪ್ರೇರೇಪಿಸುತ್ತದೆ. ಇದಕ್ಕೆ ಬೇಂದ್ರೆಯವರ ಕೂಡ ಹೊರತಾಗಿಲ್ಲ. ತಮ್ಮ ಬಾಲ್ಯವನ್ನು ರೂಪಿಸಿರುವ ಪರಿಸರ ಮತ್ತು ಪರಂಪರೆಯ ತೀವ್ರವಾದ

ಅನುಭವದಿಂದಾಗಿ ಬೇಂದ್ರೆಯವರು ಬಹುತೇಕ ಎಲ್ಲಾ ಅಂಶಗಳನ್ನು 'ಮಾತೆ'ಎಂಬ ಪ್ರತಿಮೆಯಿಂದಲೇ ನೋಡಿದರು.

ಆಗ ಭಾರತ ಮಾತೆ ಬ್ರಿಟೀಷರ ಕಪಿಮುಷ್ಟಿಯಲ್ಲಿ ಸಿಕ್ಕಿ ನರಳುತ್ತಿದ್ದಳು. ಅಂತಹ ದಿನಗಳಲ್ಲಿ ಭಾರತೀಯರಿಗೆ ಧೈರ್ಯ ತುಂಬಿ ಅವರನ್ನು ಸ್ವಾತಂತ್ರ್ಯ ಹೋರಾಟಕ್ಕೆ ಸಜ್ಜು ಮಾಡುವ ಕೆಲಸವನ್ನು ಆಗಿನ ರಾಷ್ಟ್ರೀಯ ನಾಯಕರು ಮಾಡುತ್ತಿದ್ದರು. ಅವರಲ್ಲಿ ಶ್ರೀ ಅರವಿಂದರು ಕೂಡ ಒಬ್ಬರು. ಅರವಿಂದರು 1872 ಆಗಸ್ಟ್ 15 ರಂದು ಕಲ್ಕತ್ತೆಯಲ್ಲಿ ಹುಟ್ಟಿದರು. ಅವರ ವಿದ್ಯಾಭ್ಯಾಸವೆಲ್ಲವೂ ವಿದೇಶೀ ನೆಲದಲ್ಲಿ ಆಯಿತು. ಐ.ಎ.ಎಸ್. ಪದವಿಯನ್ನು ಪಡೆದು ಭಾರತಕ್ಕೆ ಮರಳಿದರು. ಈಗಾಗಲೇ ಭಾರತದಲ್ಲಿ ಸ್ವಾತಂತ್ರ್ಯ ಹೋರಾಟ ಪ್ರಾರಂಭವಾಗಿತ್ತು. ಅರವಿಂದರ ಮುಂದೆ ಎರಡು ದಾರಿಗಳಿದ್ದವು. ಒಂದು ಸ್ವಾತಂತ್ರ್ಯದ ಹೋರಾಟದಲ್ಲಿ ಪಾಲ್ಗೊಳ್ಳುವುದು. ಇನ್ನೊಂದು ತಮ್ಮ ಓದಿಗೆ ತಕ್ಕಂತೆ ಉನ್ನತವಾದ ಹುದ್ದೆಯನ್ನುಗಳಿಸಿ ಕೊಳ್ಳುವುದು. ಆದರೆ ಅವರು ತಮ್ಮ ಮುಂದಿದ್ದ ಮೊದಲ ದಾರಿಯನ್ನು ಆರಿಸಿಕೊಂಡರು. ಬ್ರಿಟೀಷರ ವಿರುದ್ಧ ಇವರು ಅಕ್ಷರ ಹೋರಾಟವನ್ನೇ ಮಾಡಿದರು. ಆಗಿನ ಪತ್ರಿಕೆಗಳಲ್ಲಿ ಬ್ರಿಟಿಷರ ವಿರುದ್ಧ ಲೇಖನ ಗಳನ್ನು ಬರೆದರು. ಇದು ಅವರ ಸಾಹಿತ್ಯ ಜೀವನಕ್ಕೆ ನಾಂದಿ ಆಯಿತು. ಮಾನವ ಜನಾಂಗದ ಉನ್ನತವಾದ ವ್ಯಕ್ತಿತ್ವವನ್ನು ರೂಪಿಸಲು ತಮ್ಮ ಜೀವನವನ್ನು ಮುಡಿಪಾಗಿಡಬೇಕೆಂದು 1910 ಏಪ್ರಿಲ್ 4 ರಂದು ಪಾಂಡಿಚೇರಿಯ ಆಶ್ರಮಕ್ಕೆ ಬಂದರು. ಧ್ಯಾನದ ಜೊತೆಗೆ ಅಲ್ಲಿ ಸಾಹಿತ್ಯದ ಪೂಜೆಯು ನಿರಂತರವಾಗಿ ನಡೆಯತೊಡಗಿತು. ಭಾಗವತ, ಜೀವನ, ಸಾವಿತ್ರಿ, ಧವಳಗಿರಿ ಮೊದಲಾದ ಶ್ರೇಷ್ಠ ಕೃತಿಗಳು ಅರವಿಂದರ ಕಾವ್ಯ ಮೂಸೆಯಲ್ಲಿ ಮೂಡಿ ಬಂತು. ಅರವಿಂದರ ತತ್ವ ಅಂದಿನ ಯುವ ಜನಾಂಗಕ್ಕೆ ಸ್ಫೂರ್ತಿಯ ಸೆಲೆಯಾಗಿತ್ತು. ಕನ್ನಡದ ನವೋದಯ ಸಂದರ್ಭದಲ್ಲಿ ಬಹುತೇಕ ಕವಿಗಳು ಅರವಿಂದರ ಪ್ರಭಾವಕ್ಕೆ ಒಳಗಾಗಿದ್ದರು. ಇದಕ್ಕೆ ಬೇಂದ್ರೆಯವರು ಕೂಡ ಹೊರತಾಗಿರಲಿಲ್ಲ. ಅರವಿಂದರನ್ನು ಬೇಂದ್ರೆಯವರು ತಮ್ಮ ಅಂತರಂಗದ ಗುರುವೆಂದೇ ತಿಳಿದು ಪೂಜಿಸುತ್ತಿದ್ದರು. ಶ್ರೀ ಅರವಿಂದರಿಗೆ, ಶ್ರೀ ಗುರುವೇ, ಅರವಿಂದನಾಭನ ಪಾದಾರವಿಂದಕ್ಕೆ, ಗುರುನೆನೆದರೆ, ಹೃದಯ ಸಮುದ್ರ ಹೀಗೆ ಮೊದಲಾದ ಕವನಗಳಲ್ಲಿ ಕವಿ ಬೇಂದ್ರೆ ತಮ್ಮ ಅಂತರಂಗದ ಗುರುವನ್ನು ಸ್ಮರಿಸಿದ್ದಾರೆ. ಬೇಂದ್ರೆ ತಮ್ಮ ಮೇಲೆ ಆದ ಅರವಿಂದರ ಪ್ರಭಾವವನ್ನು ತಮ್ಮ ಕವನಗಳ ಮೂಲಕ ದಾಖಲಿಸಿದ್ದಾರೆ.

*'ಓ ತಾಯಿ ತಂದೆ ಶಿವನೆಂದೆ ನಿಮಗೆ ಕರುಗೊಳುವ ಅರುವಿನಿಂದೆ'*

*ನೀವಿತ್ತ ಪಾಲು ನಮಗದುವೆ ಹಾಲು ಕರುಳಾಯ್ತು ಕರುವಿನಂತೆ '5*

*(ಚಿತ್ತಭಿತ್ತಿಯ ಚಿತ್ರ)*

ಬೇಂದ್ರೆಯವರ ಪಾಲಿಗೆ ಅರವಿಂದರ ಪ್ರಭಾವ ಎಷ್ಟೆಂದರೆ ಅವರಿಗೆ ಸಮಸ್ತವು ಅರವಿಂದಮಯವಾಗಿದೆ. ಅರವಿಂದ ಗುರುವೇ ಬೇಂದ್ರೆಗೆ ತಾಯಿ ತಂದೆ ಎಲ್ಲವೂ ಆಗಿದ್ದಾರೆ. ಅರವಿಂದರ ಮಮತೆ, ಜ್ಞಾನವೆಂಬ ಹಾಲು ಬೇಂದ್ರೆಯವರ ಜ್ಞಾನದ ಹಸಿವನ್ನು ತಣಿಸಿದೆ. ಅರವಿಂದರು ಹಸುವಾದರೆ ಬೇಂದ್ರೆ ಕರು. ಒಟ್ಟಾರೆ ಅರವಿಂದರರಿಗೆ ಬೇಂದ್ರೆಯವರು ಸಂಪೂರ್ಣವಾಗಿ ಶರಣಾಗಿದ್ದಾರೆ.

ಇಂತಹ ಅರವಿಂದರ ಪ್ರಭಾವದಿಂದ ಬೇಂದ್ರೆಯವರ ಲೌಕಿಕ ಜೀವನ ಮತ್ತು ಸಾಹಿತ್ಯ ಜೀವನವು ಎರಡೂ ಕೂಡ ವಿಶಿಷ್ಟವಾಗಿ ರೂಪುಗೊಂಡಿದೆ. ಬೇಂದ್ರೆಯವರ ಕವನದಲ್ಲಿನ ಮಾತೃ ಪ್ರತಿಮೆಗೂ ಅರವಿಂದರ ಪ್ರೇರಣೆಗೂ ಒಂದು ಬಿಡಿಸಲಾರದ ನಂಟಿದೆ. 'ನನ್ನ ತಾಯಿಯ ಎಚ್ಚರ ನನಗೆ ತಂದದ್ದು ಅವರ ಶಿಶುಕಾವ್ಯ'[6] ಎಂದು ಬೇಂದ್ರೆಯವರೇ ಅರವಿಂದರ ಬಗ್ಗೆ ಹೇಳಿಕೊಂಡಿದ್ದಾರೆ. ಹೀಗೆ ಬೇಂದ್ರೆಯವರ ಮಾತೃ ಪ್ರತಿಮೆಯಲ್ಲಿ ಅಜ್ಜಿ, ತಾಯಿಯ ಪ್ರಭಾವದ ಜೊತೆಗೆ ಅರವಿಂದರ ಪ್ರಭಾವವೂ ಸೇರಿಕೊಂಡಿದೆ.

ನವೋದಯದ ಬಹುತೇಕ ಎಲ್ಲ ಕವಿಗಳ ಮೇಲೆ ಪಾಂಡಿಚೇರಿಯ ಆಶ್ರಮದ ಪ್ರಭಾವ ಆಗಿದೆ. ಕೇವಲ ಭಾರತದವರಿಗೆ ಮಾತ್ರವಲ್ಲದೆ ಹೊರದೇಶದವರನ್ನು ತನ್ನ ಸಾತ್ವಿಕ ಮತ್ತು ಆಧ್ಯಾತ್ಮಿಕ ಪ್ರಭಾವದಿಂದ ಆ ಆಶ್ರಮವು ಸೆಳೆಯಿತು. ಫ್ರಾನ್ಸ್ ದೇಶದ ಮೀರಾ ರಿಚರ್ಡ್‌ರವರು ಪಾಂಡಿಚೇರಿಯ ಆಶ್ರಮಕ್ಕೆ 1914 ಮಾರ್ಚ್ 19 ರಂದು ಬಂದರು. ಅಲ್ಲಿ ಈಗಾಗಲೇ ಆಧ್ಯಾತ್ಮಿಕ ಸಾಧನೆಯನ್ನು ಮಾಡುತ್ತಿದ್ದ ಅರವಿಂದರ ಪ್ರಭಾವಳಿಯು ಮೀರಾ ರಿಚರ್ಡ್‌ರವರನ್ನು ಅಯಸ್ಕಾಂತದಂತೆ ಸೆಳೆಯಿತು. ನಂತರ ಇಲ್ಲಿಯೇ ಉಳಿದುಕೊಂಡ ಆಕೆ ಅರವಿಂದರ ಮಾರ್ಗದರ್ಶನದಲ್ಲಿ ಆಧ್ಯಾತ್ಮಿಕ ಸಾಧನೆಯನ್ನು ಮಾಡಲು ಆರಂಭಿಸಿದರು. ಕಾಲಾನಂತರದಲ್ಲಿ ಮೀರಾ ರಿಚರ್ಡ್‌ರವರು 'ಶ್ರೀಮಾತಾ' ಎಂದು ಹೆಸರನ್ನು ಗಳಿಸಿದರು. ಬೇಂದ್ರೆಯವರ ಮೇಲೆ ಅರವಿಂದರ ಪ್ರಭಾವದ ಜೊತೆಗೆ ಪಾಂಡಿಚೇರಿಯ 'ಮದರ್' ಕೂಡ ಅಷ್ಟೇ ಪ್ರಭಾವವನ್ನು ಬೀರಿದ್ದಾರೆ. ಬೇಂದ್ರೆಯವರ ಶ್ರೀಮಾತೆಗೆ ದಿ ಮದರ್, ಬಂದೆ ಬಂದೆ, ಮಾತೃವಾಣಿ, ತಾಯ ನಗೆ, ಬರುವಳು ಬರುವಳು ಮೊದಲಾದ ಕವನಗಳಲ್ಲಿ ನಾವು ಪಾಂಡಿಚೇರಿಯ ಮಾತೆಯನ್ನು ಕಾಣಬಹುದಾಗಿದೆ. 'ಶ್ರೀಮಾತಾ' ಬೇಂದ್ರೆಯವರ ಪಾಲಿಗೆ ಆಧ್ಯಾತ್ಮಿಕ ತಾಯಿಯೇ ಆಗಿದ್ದರು.

*"ನಿನ್ನ ನೋಟವೆ ಹಾಲು ತಾಯಿ ನೀನು.*

*ಕಂಗಳಿಂದಲೆ ಕುಡಿವೆ ಕೂಸು ನಾನು*

*ಕಂಗಳಿಂದಲೆ ನುಡಿವೆ ತಾಯಿ ನೀನು*

*ನನ್ನ ಕಣ್ಣೇ ಕಿವಿಯು*

*ಕಿವಿಯು ನಾನು"*[7]

(ಶ್ರೀ ಮಾತೃಶ್ರೀಗೆ)

ಈ ರೀತಿ ಬೇಂದ್ರೆಯವರು 'ಶ್ರೀಮಾತೆ' ಯವರನ್ನು ತಮ್ಮ ಆಧ್ಯಾತ್ಮಿಕ ತಾಯಿಯನ್ನಾಗಿಸಿಕೊಂಡಿದ್ದಾರೆ. ಈ ಆಧ್ಯಾತ್ಮಿಕ ತಾಯಿಯ ಕೂಸು ಬೇಂದ್ರೆ. ಹೀಗೆ ಶ್ರೀಮಾತೆಯವರು ಬೇಂದ್ರೆಯವರಿಗೆ ಆಧ್ಯಾತ್ಮಿಕ ಪ್ರಪಂಚದ ಬಾಗಿಲನ್ನು ತೆರೆದು ತೋರಿಸಿದ ತಾಯಿ. ಇಂತಹ ಹಲವಾರು ಕವನಗಳು ಬೇಂದ್ರೆಯವರ ಕವನದ ಬುಟ್ಟಿಯಲ್ಲಿದೆ.

ಅಜ್ಜಿ ಗೋದುಬಾಯಿ, ತಾಯಿ ಅಂಬಾಬಾಯಿ, ಅರವಿಂದರು, ಶ್ರೀ ಮಾತೆ ಈ ನಾಲ್ಕು ಶಕ್ತಿಗಳು ಬೇಂದ್ರೆಯವರನ್ನು ರೂಪಿಸಿದರು. ಬೇಂದ್ರೆಯವರ ಜೀವನದ ಘಟ್ಟಗಳಲ್ಲಿ ಈ ನಾಲ್ಕು ಶಕ್ತಿಗಳು ಬೇಂದ್ರೆಯವರನ್ನು ರೂಪಿಸಿದರು. ಬೇಂದ್ರೆಯವರ ಜೀವನದ ಘಟ್ಟಗಳಲ್ಲಿ ಈ ನಾಲ್ಕು ಶಕ್ತಿಗಳು ಬೇಂದ್ರೆಯವರನ್ನು ಭೌತಿಕವಾಗಿ ಹಾಗೆಯೇ ಭೌದ್ಧಿಕವಾಗಿ ಬೆಳೆಸಲು ಸಹಾಯಕರಾದವರು. ಬೇಂದ್ರೆಯವರದು ಮೊದಲೇ ಸ್ತ್ರೀಪೋಷಿತ ಬಾಲ್ಯ. ಇದು ಅವರಲ್ಲಿ ಮಾತೃ ಪ್ರಜ್ಞೆ ಮೂಡಲು ಸಹಾಯಕವಾಯಿತು. ನಂತರ ಬೇಂದ್ರೆ ಜೀವನದಲ್ಲಿ ಬಂದ ಅರವಿಂದ ಮತ್ತು ಶ್ರೀಮಾತೆಯವರ ಸಹಾಯದಿಂದ ಈಗಾಗಲೇ ಬೇಂದ್ರೆಯ ಮನದಲ್ಲಿ ಮೂಡಿದ್ದ ಮಾತೃ ಪ್ರಜ್ಞೆ ಜಾಗೃತವಾಯಿತು. ಈ ನಾಲ್ಕು ಶಕ್ತಿಗಳಿಂದ ಪಡೆದ ತೀವ್ರವಾದ ಅನುಭವಗಳಿಂದಲೇ ಬೇಂದ್ರೆಯವರ ಕವನಗಳಲ್ಲಿ ಮಾತೃತ್ವದ ಪ್ರಜ್ಞೆಯು ಢಾಳವಾಗಿ ಮೂಡಿಬಂದಿದೆ. ಒಟ್ಟಾರೆಯಾಗಿ ಅಜ್ಜಿ ಗೋದುಬಾಯಿ. ತಾಯಿ ಅಂಬಾಬಾಯಿ ಅರವಿಂದರು, ಶ್ರೀ ಮಾತೆಯಂತಹ ಈ ನಾಲ್ಕು ಮಹಾನ್ ಶಕ್ತಿಗಳು ಬೇಂದ್ರೆಯವರ ಜೀವನದಲ್ಲಿ ಪ್ರವೇಶಿಸಿ ಅವರ ಅಪೂರ್ವವಾದ ವ್ಯಕ್ತಿತ್ವವನ್ನು ಹೊಂದಲು ಸಹಾಯವನ್ನು ಮಾಡಿದರು. ಈ ನಾಲ್ಕು ಮಹಾನ್ ಶಕ್ತಿಗಳು ತಮ್ಮೆಲ್ಲಾ ಶಕ್ತಿಯನ್ನು ಬೇಂದ್ರೆಯವರಿಗೆ ಧಾರೆಯೆರದು ಅವರ ಲೌಕಿಕ ಬದುಕನ್ನು ಮತ್ತು ಅವರ ಸಾಹಿತಿಕ ಬದುಕನ್ನು ವಿಶಿಷ್ಟವಾದ ರೀತಿಯಲ್ಲಿ ರೂಪಿಸಿದರು.

## ಅಧ್ಯಾಯ ಎರಡು

## ಅಂಬಿಕಾತನಯದತ್ತರ ತಾಯಿ ಅಂಬಿಕೆ

ಇಡೀ ಪ್ರಪಂಚದ ಸೃಷ್ಟಿಗೆ ಕಾರಣಳಾದವಳು ತಾಯಿ. ಜನ್ಮ ಕೊಟ್ಟ ತಾಯಿ ಆ ಮಗುವಿಗೆ ಬದುಕನ್ನು ಸಹ ನೀಡುತ್ತಾಳೆ. ತಾಯಿ ತನ್ನ ಮಗುವಿನ ಶ್ರೇಯೋಭಿವೃದ್ಧಿಗಾಗಿ ತನ್ನ ಜೀವನವನ್ನು ಮುಡಿಪಾಗಿಡುತ್ತಾಳೆ.

*'ಆಚಾರಕ್ಕರ ಸಾಗು ನೀತಿಗೆ ಪ್ರಭುವಾಗು*

*ಮಾತಿನಲ್ಲಿ ಚೂಡಾಮಣಿ ಆಗು। ನೀ*

*ಜ್ಯೋತಿಯೆ ಆಗು ಜಗಕ್ಕೆಲ್ಲ॥'* [1]

ಹೀಗೆ ತಾಯಿ ಮಗುವಿಗೆ ಉತ್ತಮ ಸಂಸ್ಕಾರವನ್ನು ನೀಡುವತ್ತ ಗಮನಹರಿಸುತ್ತಾಳೆ. ಒಂದು ಆರೋಗ್ಯವಂತಹ ಸಮಾಜಕ್ಕೆ ಮಾನಸಿಕವಾಗಿ ಹಾಗೂ ದೈಹಿಕವಾಗಿ ಸದೃಢರಾದ ಸಂಸ್ಕಾರವಂತಹ ವ್ಯಕ್ತಿಗಳು ಅನಿವಾರ್ಯ. ಈ ರೀತಿಯ ಅನಿವಾರ್ಯತೆಯನ್ನು ತುಂಬಿಕೊಡುವಂತಹ ಕೆಲಸವನ್ನು ತಾಯಿ ಮಾಡುತ್ತಾಳೆ.

ಅಷ್ಟಾದಶ ವರ್ಣನೆಗಳು ಹಳೆಗನ್ನಡ ಕಾವ್ಯದ ಮುಖ್ಯ ಲಕ್ಷಣಗಳಲ್ಲಿ ಒಂದಾಗಿತ್ತು. ಪ್ರಕೃತಿವರ್ಣನೆ, ನಗರವರ್ಣನೆ, ಋತುವಿನ ವರ್ಣನೆ ಹೀಗೆ ಕಾವ್ಯದಲ್ಲಿರಬೇಕಾದ ವರ್ಣನೆಗಳ ಪಟ್ಟಿಯನ್ನು ಪಂಡಿತರು ಸಿದ್ಧ ಪಡಿಸಿದ್ದರು. ಇಂತಹ ವರ್ಣನೆಗಳು ಕಾವ್ಯದಲ್ಲಿದ್ದರೆ ಮಾತ್ರ ಅಂತಹ ಕವಿಗಳ ಕಾವ್ಯವನ್ನು ಪಂಡಿತರು ಒಪ್ಪಿಕೊಳ್ಳುತ್ತಿದ್ದರು. ಇಂತಹ ಅಷ್ಟಾದಶ ವರ್ಣನೆಗಳಲ್ಲಿ ಹೆಣ್ಣಿನ ವರ್ಣನೆಯೂ ಒಂದಾಗಿತ್ತು. ಹಳೆಗನ್ನಡ ಕವಿಗಳು ಹೆಣ್ಣಿನ ವರ್ಣನೆಯನ್ನು ಮಾಡುತ್ತಿದ್ದರೂ ಅದು ಕೇವಲ ಅವಳ ಸೌಂದರ್ಯದ ವರ್ಣನೆಯಾಗಿ ಮೂಡಿಬರುತ್ತಿತ್ತು. ಸೌಂದರ್ಯದ ಹೊರತಾಗಿ ಹೆಣ್ಣಿನ ಬೇರೆ ಬೇರೆ ಭಾವಗಳು ಅಷ್ಟಾದಶ ವರ್ಣನೆಯಡಿಯಲ್ಲಿ ಮೂಡಿ ಬರಲೇ ಇಲ್ಲ. ಒಟ್ಟಾರೆ ಹಳೆಗನ್ನಡ ಕಾವ್ಯವನ್ನು ಗಮನಿಸಿದರೆ ಎಲ್ಲೂ 'ಮಾತೃತ್ವದ ಪ್ರತಿಮೆ'ಗಳು ಇಡಿಯಾಗಿ ಮೂಡಿ ಬಾರದೆ ಇರುವುದು ತಿಳಿದು ಬರುತ್ತದೆ.

ಪಂಡಿತರ ಕಾವ್ಯದಲ್ಲಿ ಮಾತ್ರ ಮಾತೃತ್ವದ ಕಲ್ಪನೆ ಮೂಡಿ ಬರಲಿಲ್ಲ. ತಾಯಿ ಮತ್ತು ಅವಳ ವಾತ್ಸಲ್ಯ ಭಾವವು ಕಾವ್ಯದ ಕಥೆಗೆ ಅನುಸಾರವಾಗಿ ಅಲ್ಲಲ್ಲಿ ಮಾತ್ರ ಮೂಡಿ ಬರುತ್ತಿತ್ತು. ಅದು ಬಿಟ್ಟರೆ ಬೇರೆ ಕಡೆ ಈ ಕಲ್ಪನೆ ಮೂಡದೆ ಇರುವುದು ಒಂದು ವಿಷಾದಕರ ಸಂಗತಿಯಾಗಿದೆ. ಆದರೆ ಅನಕ್ಷರಸ್ಥರ ಸಾಹಿತ್ಯ ಎಂದೇ ಕರೆಯಲ್ಪಡುವ ಜನಪದ ಸಾಹಿತ್ಯದಲ್ಲಿ ಈ ಕಲ್ಪನೆ ಹೇರಳವಾಗಿ ಮೂಡಿ ಬಂದಿದೆ.

ತಾಯಿಯ ರಕ್ತ ಮಾಂಸಗಳಿಂದಲೇ ನಾವು ರೂಪುಗೊಂಡಿರುತ್ತೇವೆ. ಆಕೆಯ ಮೊಲೆ ಹಾಲಿನಿಂದಲೇ ಬೆಳೆದಿದ್ದೇವೆ. ಆಕೆ ನಮ್ಮನ್ನು ಬೆಳೆಸಿರುವುದರ ಜೊತೆಗೆ ಭೀಮನಂತಹ ರಕ್ಷೆಯನ್ನು ನಮಗೆ ಕಟ್ಟಿಕೊಡುತ್ತಾಳೆ. ಅವಳ ತ್ಯಾಗದಿಂದಲೇ ಮಗು ಒಂದು ಸಂಸ್ಕಾರವಂತನಾಗಿ ಬೆಳೆಯಲು ಸಾಧ್ಯವಾಗಿರುವುದು. ಈ ಎಲ್ಲಾ ಅಂಶಗಳನ್ನು ಜನಪದರು ಮರೆತ್ತಿಲ್ಲ. ಆದ್ದರಿಂದಲೇ ಜಾನಪದ ಸಾಹಿತ್ಯದಲ್ಲಿ ತಾಯಿಯನ್ನು ಕುರಿತಾದ ಇಂತಹ ತ್ರಿಪದಿಗಳು ಹೇರಳವಾಗಿ ಸಿಗುತ್ತದೆ.

*"ಬ್ಯಾಸಗಿ ದಿವಸಕ ಬೇವಿನ ಮರ ತಂಪ।*

*ಭೀಮರತಿಯೆಂಬ ಹೊಳಿ ತಂಪ। ಹಡದವ್ವ।*

*ನೀ ತಂಪ ನನ್ನ ತವರೀಗಿ ॥"* [2]

ಮುಂದೆ ಬಂದಂತಹ ಹೊಸಗನ್ನಡ ಸಾಹಿತ್ಯವು ಅನೇಕ ಹೊಸತುಗಳಿಗೆ ನಾಂದಿ ಹಾಡಿತು. ಈ ಕಾಲದಲ್ಲಿ ಬಂದಂತಹ ಅನೇಕ ಕವಿಗಳು ಹೊಸತನ್ನು ತಮ್ಮ ಕಾವ್ಯದಲ್ಲಿ ಪ್ರಯೋಗ ಮಾಡಿದರು. ತಮ್ಮ ಉನ್ನತಿಗೆ ಕಾರಣಳಾದ ತಾಯಿಯನ್ನು ಕವಿಗಳು ತಮ್ಮ ಸಾಹಿತ್ಯ ರಚನೆಯಲ್ಲಿ ಮರೆಯಲಿಲ್ಲ. ಅನೇಕ ಹೊಸಗನ್ನಡ ಕವಿಗಳು ತಮ್ಮ ಅನೇಕ ಕವಿತೆಗಳಲ್ಲಿ ತಾಯಿಯನ್ನೇ ಕವಿತೆಯ ವಸ್ತುವನ್ನಾಗಿಸಿದರು. ಅಂತಹ ಕವಿಗಳಲ್ಲಿ ಬೇಂದ್ರೆಯವರದ್ದು ಎದ್ದು ಕಾಣುವ ಹೆಸರು. ಬೇರೆ ಹೊಸಗನ್ನಡದ ಕವಿಗಳು ತಾಯಿಯನ್ನು ಕೇವಲ ಒಂದೋ ಎರಡೊ ಕವನಗಳಲ್ಲಿ ವಸ್ತುವನ್ನಾಗಿಸಿದರೆ ಬೇಂದ್ರೆ ತಮ್ಮ ಬಹುಪಾಲು ಕವಿತೆಗಳಲ್ಲಿ ತಾಯಿಯನ್ನು ಕವಿತೆಯ ವಸ್ತುವನ್ನಾಗಿಸಿದ್ದಾರೆ. ಬೇಂದ್ರೆಯ 'ಉಯ್ಯಾಲೆ' ಕವನ ಸಂಕಲನದಲ್ಲಿ 'ಕರುಳಿನ ವಚನಗಳು' ಎಂಬ ಭಾಗದಲ್ಲಿ ತಾಯಿ ಮತ್ತು ಅವಳ ವಾತ್ಸಲ್ಯ ಭಾವವು ಮೂಡಿ ಬಂದಿದೆ. ಕೇವಲ ಇಲ್ಲಿ ಮಾತ್ರವಲ್ಲದೆ ಬೇಂದ್ರೆಯ ಇನ್ನಿತರ ಕವನ ಸಂಕಲನದ ಅನೇಕ ಕವನಗಳಲ್ಲಿ 'ತಾಯಿ' ವಸ್ತುವಾಗಿದ್ದಾಳೆ.

ಈ ಹಿಂದೆ ನಾವು ತಿಳಿದಂತೆ ಬೇಂದ್ರೆ ಕಾವ್ಯದ ಸ್ಫೂರ್ತಿಯ ಸೆಲೆ ಅವರ ತಾಯಿ ಅಂಬಿಕೆ. ಆದ್ದರಿಂದಲೇ ಅವರು ತಮ್ಮ ತಾಯಿಯ ಹೆಸರನ್ನೇ ಕಾವ್ಯನಾಮವಾಗಿಟ್ಟುಕೊಂಡರು. "ಮಾತೃ ನಾಮಖ್ಯಾತನಾಗುವದು ಸಂಪ್ರದಾಯವಂತರಿಗೆ ಸರಿತೋರಲಿಲ್ಲ. ಸಾಹಿತ್ಯಕ್ಕೆ ತಾಯಿ ಸರಸ್ವತಿ; ವಾಣಿಗೆ ಮೂಲ ಭಾರತಿ; ಐತಿರೇಹ ಮಹೀದಾಸನಿಗೆ ತಾಯಿ ಗುರುಸ್ಥಾನೀಯ; ಶ್ರೀ ರಾಮ ಕೌಸಲ್ಯಾನಂದನ, ಅರ್ಜುನ ಕೌಂತೇಯ, ಆದರೂ ಕೆಲವು ಮೂಗುಗಳಿಗೆ ಈ ವಾಸನೆ ಸರಿಹೋಗಲಿಲ್ಲ"[3] ಆದರೆ ತಾಯಿಯ ಹೆಸರಿನ ಕಾವ್ಯನಾಮದ ಮೂಲಕವೇ ಸಂಪ್ರದಾಯಸ್ಥರಿಗೆ ಬೇಂದ್ರೆ ಎದಿರೇಟು ನೀಡಿದರು.

*"ನಿನ್ನ ಹೆಸರಿನಲ್ಲಿ ನಾನು ಬರೆವುದೇನು ಸೋಜಿಗ*
*ತಿಳಿಯಲಾರದೀ ಜಗ"*

(ಅಂಬಿಕಾತನಯದತ್ತ)

ತಾಯಿ ಅಂಬಿಕೆಯ ಸಹನೆಯ ವ್ಯಕ್ತಿತ್ವವು ಬೇಂದ್ರೆಯವರನ್ನು ಬಹಳವಾಗಿ ಪ್ರಭಾವಿಸಿತ್ತು. ಆಕೆಯ ಅಂಗಾಂಗಗಳ ಸ್ಪರ್ಶದಲ್ಲೂ ಮಹಾ ಅನುಭವವನ್ನು ಬೇಂದ್ರೆಯವರು ಕಂಡಿದ್ದರು. " 'ಅಂಬಿಕೆ' ಯ ತೊಡೆ, ಹೊಟ್ಟೆ, ಎದೆ, ಕೊರಳು, ತುಟಿ, ಕಣ್ಣು – ಒಂದೊಂದರಲ್ಲಿಯೂ ಈ ಮಹಾಸ್ಪರ್ಶವಿತ್ತು. ಆದರೆ ಆಕೆಯ ದೀಕ್ಷೆಯಲ್ಲಿ ಅನಂತ ಸಹನೆ ಇತ್ತು. ಯುಗ ಯುಗದ ನೋಂಪಿಯ ಕಂಪಿತ್ತು. ತಂದೆಯ ಅವನ ಬಳಗದ ನಿಕಟ ಸಾನ್ನಿಧ್ಯದಿಂದ ದೈವವಂಚಿತನಾದ ನಾನು, ನನ್ನ ತಾಯಿ, ತಾಯಿಯ ತಾಯಿ, ಆಕೆಯ ತಾಯಿ ಇವರ ಪ್ರತ್ಯಕ್ಷ ಚಾರಿತ್ರ್ಯದಲ್ಲಿ ಪೌರುಷವನ್ನು ಕಂಡೆ"[5] ಈ ಮೂಲಕ ಬೇಂದ್ರೆ ತನ್ನ ತಾಯಿಯಲ್ಲಿ ದೈವವನ್ನು ಕಂಡರು. "ಅಂಬಿಕಾತನಯ – ಉದರದs ಹೂವು" [6] ಮತ್ತು ಶ್ರೀ ಬ್ರಹ್ಮ ಚೈತನ್ಯರ ಸಜೀವ ಸಮಾಧಿ ತಾನು ಎಂಬ ವಿಶಿಷ್ಟವಾದ ಅನುಭಾವದ ನೆಲೆಗೆ ಬೇಂದ್ರೆಯವರು ತಲುಪಿದ್ದರು.

ಹೆಣ್ಣು ಮೊದಲು ತಾಯಿ ನಂತರ ಹೆಂಡತಿ, ಗೆಳತಿ, ಪ್ರಿಯೆ, ಅಕ್ಕ, ತಂಗಿ. ಪ್ರತಿಯೊಂದು ಹೆಣ್ಣುಮಗುವಿನಲ್ಲಿಯೂ ಒಬ್ಬ ತಾಯಿ ಇರುತ್ತಾಳೆ ಎನ್ನುವುದು ನಂಬಿಕೆಯ ಮಾತು. ಆದರೆ ಬೇಂದ್ರೆಯವರು ತಮ್ಮ ತಾಯಿಯಲ್ಲಿಯೇ ಹೆಣ್ಣಿನ ವಿವಿಧ ರೂಪಗಳ ಪರಿಚಯವಾಯಿತ್ತೆಂದು ಹೇಳಿದ್ದಾರೆ.

*"ಹೆಣ್ಣು ಎನ್ನುವ ಮಾತು ತಾಯಿ ಎನ್ನುವ ಮಾತು*
*ಎರಡಲ್ಲ ಒಂದೆಂದು ತಿಳಿಸಿದರು.*
*ಆ ಬಸಿರೆ ಬ್ರಹ್ಮಾಂಡ, ಹೆಸರಿಗೆ ಪಿಡಾಂಡ,*
*ಹುಸುರೀಗೆ ಬೆಲೆಯೆಂದು ಕಲಿಸಿದರು"*[7]

(ಬಾಲ್ಯಕಾಂಡ)

ತಾಯಿಯ ಗರ್ಭದಲ್ಲಿ ಮಗು ರೂಪುಗೊಳ್ಳುವುದು ಸೃಷ್ಟಿಯ ವೈಚಿತ್ರಗಳಲ್ಲಿ ಒಂದಾಗಿದೆ. ಮಗು ತಾಯಿಯ ಗರ್ಭದಲ್ಲಿರುವ ವಿವರಣೆಯನ್ನು ಕಾವ್ಯ ಭಾಷೆಯಲ್ಲಿ ಹಿಡಿಯಲು ಸಾಧ್ಯವೇ? ಸಾಧ್ಯ ಎನ್ನುತ್ತದೆ ಬೇಂದ್ರೆಯ ಕಾವ್ಯ. ತಾಯಿ ತೆಗೆದು ಕೊಳ್ಳುವ ಆಹಾರವೇ ಮಗುವಿನ ಆಹಾರ, ತಾಯಿಯ ಉಸಿರೇ ಮಗುವಿನ ಉಸಿರಾಗಿರುತ್ತದೆ ಎಂದು ವೈದ್ಯ ವಿಜ್ಞಾನವು ನಮಗೆ ತಿಳಿಸಿಕೊಡುತ್ತದೆ. ಇಂತಹ ವಿಷಯಗಳನ್ನೆಲ್ಲಾ ಬೇಂದ್ರೆ ತಮ್ಮ ಕಾವ್ಯ ಭಾಷೆಯಲ್ಲಿ ಹಿಡಿಯುವ ಪ್ರಯತ್ನ ಮಾಡಿದ್ದಾರೆ.

*"ನಿನ್ನ ಬಾಯಿಂದುಂಡುಂಡು ನಿನ್ನ ಮೂಗಿಂದು ಸುರಿ*

*ಬಾಳುವೆನೆ ಜೀವಜಂತು*

*ನಿನ್ನ ಕರುಳಿಂದರಿತು, ನಿನ್ನ ಭಾವದಿ ಬೆರೆತು*

*ತಪಿಸುತ್ತಲಿರುವೆನಿಂತು"*

(ತಾಯ್ತಂದೆಗೆ)

ತಾಯಿಯ ಗರ್ಭದಲ್ಲಿರುವ ಮಗು ಕೇವಲ ತಾಯಿಯ ಆಹಾರ, ಉಸಿರನ್ನು ಮಾತ್ರ ತೆಗೆದುಕೊಳ್ಳುವುದಿಲ್ಲ. ಜೊತೆಗೆ ತಾಯಿಯ ಮೂಲಕ ಮಂತ್ರ, ತಂತ್ರವನ್ನು ಕಲಿತು ವೀರನಾಗುವ ಆಸೆ. ಆದರೆ ಅಲ್ಲಿಯವರೆಗೆ ತಾಯಿ ಮಗುವನ್ನು ರಕ್ಷಿಸು ಎಂಬ ವಿನಂತಿಯ ಭಾವ ಇಲ್ಲಿದೆ. ತಾಯಿಯ ಅಮೃತವನ್ನು ಕುಡಿದು ಅಮರನಾಗುವ ಆಸೆ ಮಗುವಿಗೆ. ಆದರೆ ಅಮರನಾಗುವೆನೆ? ಎಂಬ ಸಂದೇಹ ಮಗುವಿಗಿದೆ. ಅಮರನಾಗುವುದು ಸುಲಭದ ಮಾತಲ್ಲ ಆದರೆ ತಾಯಿಯ ಅಮೃತಕ್ಕೆ ಅಮರರನ್ನಾಗಿಸುವ ಶಕ್ತಿ ಇದೆ. ಈ ಶಕ್ತಿಯ ಅರಿವು ಮಗುವಿಗಿದ್ದರೂ ವಯಸ್ಸಿನ ಸಹಜವಾದ ಮಗುವಿನ ಸಂದೇಹ ಇಲ್ಲಿ ಮೂಡಿ ಬಂದಿದೆ.

*"ನಿನ್ನ ಮನಸೋಮನಲಿ ಸುರಿವ ಅಮೃತವನುಂಡು*

*ಅಮರನಾಗುವೆನೆ ತಾಯೇ*

*ನಿನ್ನ ಮಂತ್ರವ ಕಲಿತು, ನಿನ್ನ ತಂತ್ರದಿ ಕಲೆತು*

*ಕಲಿಯಾಗುವ ತನಕ ಕಾಯೆ"*

(ತಾಯ್ತಂದೆಗೆ)

ವೈಜ್ಞಾನಿಕ ವಿಷಯಗಳ ಜೊತೆ ತಾಯಿಯ ಗರ್ಭದಲ್ಲಿರುವ ಆ ಮಗುವಿನ ಆಸೆಗಳನ್ನು ಸರಳವಾದ ಶೈಲಿಯಲ್ಲಿ ಬೇಂದ್ರೆ ಹಿಡಿದಿಟ್ಟಿರುವುದು ಅವರ ಪ್ರತಿಭೆಗೆ ಹಿಡಿದ ಕೈಗನ್ನಡಿಯಾಗಿದೆ.

"ಬೇಂದ್ರೆಯವರ ವ್ಯಕ್ತಿತ್ವ ರೂಪುಗೊಳ್ಳುವುದಕ್ಕೆ ಅವರ ಮನೆತನ, ಸುತ್ತಮುತ್ತಲಿನ ಪರಿಸರ, ವಿಶ್ವ ವಿದ್ಯಾಲಯದ ಶಿಕ್ಷಣ ಇವುಗಳ ಹೊಣೆ ನಾಲ್ಕರಲ್ಲೊಂದು ಪಾಲಾದರೆ ಉಳಿದ ಮೂರು ಪಾಲಿನ ಹೊಣೆ ತಾಯಿಯದು."[10] ಎಂದು ಕೀರ್ತಿನಾಥ ಕುರ್ತುಕೋಟಿಯವರು ಬೇಂದ್ರೆಯವರ ಮೇಲೆ ಅವರ ತಾಯಿಯ ಪ್ರಭಾವವನ್ನು ಸ್ಪಷ್ಟವಾಗಿ ಗುರುತಿಸಿದ್ದಾರೆ. ಬೇಂದ್ರೆಯವರ ತಾಯಿ ಅಂಬಿಕೆ

ರಾಮನ ಪರಮಭಕ್ತರು. ದೈವ ಭಕ್ತಿ ಎಂಬುದು ಅವರಲ್ಲಿ ರಕ್ತಗತವಾಗಿ ಬಂದಿತ್ತು. ತಾಯಿ ಅಂಬಿಕೆಯ ಈ ಆಸ್ತಿಕತೆ ಬೇಂದ್ರೆಯವರನ್ನು ಬಹುವಾಗಿ ಪ್ರೇರೇಪಿಸಿತು.

*"ಅಂಬಿಕೆಯ ಗರ್ಭ*
*ತುಂಬಿದಾ ಬೆಳಕಾ*
*ಸೂರ್ಯನ ಝಳಕಾ*
*ದತ್ತ ಮಿಂದಾ"[11]*

(ಹತ್ತು)

ಇಲ್ಲಿ ಬೆಳಕು ಜ್ಞಾನದ ಉಪಾಸನೆಗೆ ಸಂಕೇತವಾಗಿದೆ. ಅಂಬಿಕೆಯಲ್ಲಿನ ದೈವೀಕತೆ ಎಂಬುದು ಬೆಳಕಾಗಿ ಅವಳಲ್ಲಿ ತುಂಬಿದೆ. ಅಂತಹ ಜ್ಞಾನದ ಬೆಳಕಿನ ಉಪಾಸನೆಯ ಸ್ನಾನವೇ ದತ್ತನಿಗೆ ತಪಸ್ಸಾಗಿದೆ.

ಬೇಂದ್ರೆಯವರ ಸಾಹಿತ್ಯ ಕೃಷಿಗೆ ಮತ್ತು ಅದಕ್ಕೆ ಸಂಬಂಧಿಸಿದ ಕೆಲಸ ಕಾರ್ಯಗಳಿಗೆ ತಾಯಿ ಅಂಬಿಕೆಯ ಪೂರ್ಣ ಬೆಂಬಲ ಆಶೀರ್ವಾದಗಳಿದ್ದವು. "ಮಹಾರಾಷ್ಟ್ರ ಕುಟುಂಬ ಮಾಲೆಯ ಮೂಲ ಸಂಪಾದಕರಾದ 'ಸಹಕಾರಿ ಕೃಷ್ಣ'ರ ಗ್ರಂಥ ಭಂಡಾರವನ್ನೇ ನಾವು ಗೆಳೆಯರು ಕೊಂಡೆವು; ಪುತ್ರ ವಾತ್ಸಲ್ಯದಿಂದ ನನ್ನ ತಾಯಿ ತನ್ನ ಬಂಗಾರದ ಉಂಗುರವನ್ನೇ ಈ ಕೆಲಸಕ್ಕೆ ಕೊಟ್ಟಳು"[12] ಹೀಗೆ ತಾಯಿ ಅಂಬಿಕೆ ತನ್ನ ಮಗನ ಶ್ರೇಯೋಭಿವೃದ್ಧಿಗೆ ತನ್ನ ಕೈಲಾದ ಸಹಾಯ ಸಹಕಾರಗಳನ್ನು ನೀಡಿದಳು. ಇಂಥ ತಾಯಿಗೆ ತನ್ನ ಮುದ್ದು ಮಗನ ಕವನಗಳ ಬಗ್ಗೆ ಆಕೆಯ ಪ್ರತಿಕ್ರಿಯೆ ಏನಾಗಿರಬಹುದೋದು ?

***"ದೇವರ ನೆನೆದರೆ ಕವನ ಸಾರ್ಥಕವಹುದು***

***ಗುಬ್ಬಿ ಕಾಗೆಯ ಪದ್ಯ ಯಾ ಕವನ?***

***ಆಕೆ ಹೀಗೆಂದರೂ ನನ್ನ ಕವಿತೆಯ ಕೇಳಿ***

***ಉತ್ಸಾಹ ಪಡೆದಿತ್ತು ತಾಯಿಮನ "[13]***

ತಾಯಿ–ಪಾರ್ವತಿ–ಅಂಬಿಕೆ

ತಾಯಿ ಅಂಬಿಕೆ ಬೇಂದ್ರೆಯ ಸ್ಫೂರ್ತಿಯ ದೇವತೆ ಮಾತ್ರವಾಗಿರದೆ ಸೂಕ್ಷ್ಮ ವಿಮರ್ಶಕಿಯೂ ಆಗಿದ್ದಳು. 'ಗುಬ್ಬಿ ಕಾಗೆಯ ಪದ್ಯ ಯಾ ಕವನ? ಎಂಬ ಪ್ರಶ್ನೆಯಲ್ಲಿಯೇ ತಾಯಿ ಅಂಬಿಕೆಯಲ್ಲಿ ಒಬ್ಬ ಸೂಕ್ಷ್ಮ ಮನಸ್ಸಿನ ವಿಮರ್ಶಕಿಯಿರುವುದು ತಿಳಿದು ಬರುತ್ತದೆ. ಹಾಗೆಯೇ ತನ್ನ ಮಗನ ಕವನ ಎಂದು ತಾಯಿ ಅಂಬಿಕೆ ಅವನ ಕವನಗಳನ್ನು ಮೆಚ್ಚದೆ ಒಬ್ಬ ಓದುಗಳಾಗಿ ಓದಿ ಮೆಚ್ಚಿದ್ದಾಳೆ. ನಂತರ ಇಂತಹ ಕವನಗಳನ್ನು ಬರೆದವನು ತನ್ನ ಮಗ ಎಂದು ಸಂತೋಷಿಸಿದ್ದಾಳೆ.

ಬೇಂದ್ರೆಯ ತಾಯಿ ಅಂಬಿಕೆ ಕೇವಲ ಸ್ಫೂರ್ತಿಯ ದೇವತೆ ಮಾತ್ರವಲ್ಲದೆ ಸೂಕ್ಷ್ಮ ವಿಮರ್ಶಕಿಯೂ ಕೂಡ ಹೌದು.

ಮಗುವಿನ ಆರೋಗ್ಯದ ದೃಷ್ಟಿಯಿಂದ ತಾಯಿಯ ಹಾಲು ತೀರಾ ಮುಖ್ಯವಾಗಿದೆ. ತಾಯಿಯ ಹಾಲು ಮಗುವಿನ ದೈಹಿಕ ಬೆಳವಣಿಗೆ ಜೊತೆಗೆ ಆತನನ್ನು ಮಾನಸಿಕವಾಗಿ ಸುಸಂಸ್ಕೃತನನ್ನಾಗಿ ಮಾಡುತ್ತದೆ. ಆದ್ದರಿಂದಲೇ ತಾಯಿಯ ಹಾಲು ಅಮೃತಕ್ಕೆ ಸಮ ಎಂದು ಹೇಳಲಾಗಿದೆ. ಮೊಲೆಗಳು ಹೆಣ್ಣಿನ ತಾಯ್ತನದ ಪ್ರತೀಕ. ಹಿಂದಿನ ಕವಿಗಳು ಮೊಲೆಗಳು = ಕಾಮ ಎಂಬಂತೆ ತಮ್ಮ ಕಾವ್ಯದಲ್ಲಿ ಚಿತ್ರಿಸಿದ್ದಾರೆ. ಆದರೆ ಬೇಂದ್ರೆಯವರು ಮೊಲೆಗಳನ್ನು ವಾತ್ಸಲ್ಯದ ದೃಷ್ಟಿಯಿಂದ ಚಿತ್ರಿಸಿದ್ದಾರೆ. ಬೇಂದ್ರೆಯವರು ಮೊಲೆಗಳೆಂದರೆ 'ನನ್ನ ಕಂದನೂದುವ ಅವಳಿ ಶಂಖಗಳಿವು', ಎಲ್ಲರ ತಾಯಿಯಾದ ನಲ್ಲಮ್ಮನ ಗುಡಿಯ ಜೋಡು ಕಳಸಗಳಿವು' ಎಂಬಂತಹ ದೈವೀ ಚಿತ್ರಣವನ್ನು ಚಿತ್ರಿಸಿದ್ದಾರೆ. ಮೊಟ್ಟ ಮೊದಲ ಬಾರಿಗೆ ಈ ರೀತಿಯ ಚಿತ್ರಣವನ್ನು ಬೇಂದ್ರೆಯವರು ತಂದಿದ್ದಾರೆ.

*"ಹಾಲಿನ ಬಟ್ಟಲುಗಲಳಲ್ಲ; ಮಾಂಸದ ಬಟ್ಟಲುಗಳಲ್ಲ!*
*ಜಗದಂಬೆಯು ಜೀವ ಶಿಶುವನ್ನು*
*ಮಲಗಿಸಿ ತೂಗುವ ತೊಟ್ಟಿಲು ಕಾಲುಗಳಿವು"*[14] *(ಮೊಲೆ)*

ಇದೊಂದು ಅತ್ಯಂತ ಶ್ರೇಷ್ಠವಾದ ಭಾವನೆ. ಸಾಮಾನ್ಯವಾಗಿ ಮೊಲೆಗಳೆಂದರೆ ಕಾಮದ ದೃಷ್ಟಿಯೇ ಪ್ರಧಾನವಾಗಿರುತ್ತದೆ. ಆದರೆ ಇಲ್ಲಿ ಬೇಂದ್ರೆ ಆ ದೃಷ್ಟಿಯನ್ನು ಕಿತ್ತೊಗೆದು ವಿಶಿಷ್ಟವಾದ ರೂಪಕದ ಮೂಲಕ ವಿಶಿಷ್ಟವಾದ ಭಾವವನ್ನು ಮೂಡಿಸಿದ್ದಾರೆ.

ತಾಯಿಯೇ ಮೊದಲ ಗುರು. ಆಕೆ ತನ್ನ ಮಗುವಿಗೆ ಎಲ್ಲಾ ರೀತಿಯ ಸಂಸ್ಕಾರವನ್ನು ಕಲಿಸುತ್ತಾಳೆ. ತನ್ನ ಮಾತಿನ ಮೂಲಕ ತನ್ನ ಮಗು ಸಮಾಜದಲ್ಲಿ ಹೇಗೆ ಬಾಳಬೇಕೆಂಬ ರೀತಿ ನೀತಿಯನ್ನು ತಾಯಿ ಕಲಿಸುತ್ತಾಳೆ. ತಾಯಿ ಜನ್ಮದಾತೆ ಸರಿ. ಆದರೆ ತಾಯಿಯ ಮಾತು ತಾಯಿಗಿಂತ ಹೆಚ್ಚು ಎನ್ನುವುದು ಬೇಂದ್ರೆಯವರ ಅಭಿಪ್ರಾಯವಾಗಿದೆ.

*"ಮಾತನಾಡಿ ಮುತ್ತನಿತ್ತು*
*ಹಾಡಿನೊಂದ ಗುಟುಕ ಕುಡಿಸಿ*
*ಕಥೆಯದೊಂದು ಕುಟುಕ ಹಾಕಿ*
*ನೋಡಲಾಡ ಲೋಡ ಕಲಿಸಿ*
*ಮಾತಿನೊಂದು ಮಂತ್ರದಿಂದ*
*ನಮ್ಮ ದೇಹ ಯಂತ್ರ ನಡೆಸಿದಂಥ*
*ನಮ್ಮ ತಾಯಿ ಬಾಯಿ*
*ಅಽ ಮತೆ ಜನ್ಮದಾತೆ!"–*[15]

(ತಾಯಿ–ಮಾತು)

ಎಲ್ಲರ ಮನಸ್ಸಿನಲ್ಲಿ ಕೆಲವೊಮ್ಮೆ ಭಾವಗಳ ತಾಕಲಾಟವಿರುತ್ತದೆ. ಆದರೆ ಈ ಭಾವಗಳಿಗೆ ರೂಪವನ್ನು ನೀಡಲು ವ್ಯಕ್ತಿ ಅಸಮರ್ಥನಾಗುತ್ತಾನೆ. ಆಗ ಮನಸ್ಸು ತಾಯಿಯಿಂದ ಸಾಂತ್ವನವನ್ನು ಪಡೆಯಲು ತಾಯಿಯ ಹುಡುಕುತ್ತದೆ. ಇದೇ ವಸ್ತು ಬೇಂದ್ರೆಯವರ 'ತೇಲಾಡುವಾಗ' ಕವನದಲ್ಲಿದೆ. ಬೇಂದ್ರೆ ಈ ಕವನದ ಭಾವ ಸಂದರ್ಭವನ್ನು ಈ ರೀತಿ ಹೇಳಿಕೊಂಡಿದ್ದಾರೆ. "ಒಂದು ಇಣಚಿಯ ಮರಣಕ್ಕೆ ನಾನೂ ಕಾರಣನಾದೆ ಒಮ್ಮೆ. ಅಂದು ರಾತ್ರಿ ಬಿದ್ದ ಎರಡು ಕನಸುಗಳಲ್ಲಿ ಒಂದು ನನ್ನ ತಾಯಿ ಧೈರ್ಯ ಕೊಡುವಂತಿತ್ತು. ಇನ್ನೊಂದರಲ್ಲಿ ನಾನು ಹೇಳಿದ ಒಂದು ಕವನ ಕೇಳಿ ಅಣ್ಣ, ಮಾಸ್ತಿ ಮೆಚ್ಚಿದಂತಿತ್ತು. ಎಚ್ಚರಾದ ಮೇಲೆ ಅದರೊಳಗಿನ ನಾಲ್ಕೆ ಸಾಲು ನೆನಪುಳಿದವು. ಈ ಮೂರು ಘಟನೆಗಳ ಒಳಸೂತ್ರದ ಭಾವ ಇಲ್ಲಿಯ ಕವನದ ದ್ರವ್ಯವಾಗಿದೆ."

ಇಣಚಿಯನ್ನು ಕೊಂದ ಪಾಪಪ್ರಜ್ಞೆ ಬೇಂದ್ರೆಯವರನ್ನು ಬಹಳವಾಗಿ ಕಾಡಿದೆ. ಕನಸಿನಲ್ಲಿ ಬೇಂದ್ರೆ ಇಂಥ ಸಂಕಟದಿಂದ ದೂರ ಮಾಡುವಂತೆ ತಾಯಿಯನ್ನು ಪರಿಪರಿಯಾಗಿ ಬೇಡಿಕೊಂಡರು. ಅಂದರೆ ಸುಪ್ತ ಮನಸ್ಸಿನಲ್ಲಿ ತನ್ನ ತಾಯಿ ಎಂತಹ ಕಷ್ಟ ಬಂದರೂ ಕಾಪಾಡುತ್ತಾಳೆ ಎಂದು ಕವಿ ನಂಬಿದ್ದಾರೆ. ಅದಕ್ಕೆ ಸರಿಯಾಗಿ ತಾಯಿ ಕೂಡ 'ಚಿಂತ್ಯಾಕೊ ನನ್ನ ಬಾಳಾ' ಎಂದು ಸಾಂತ್ವನದ ನುಡಿಗಳನ್ನು ಹೇಳುತ್ತಾಳೆ.

*'ಪಾತಾಳ ಕಂಡರೇನು*

*ಆ ತಾಯಿ ಬಿಡುವಳೇನು*

*ಕಾಯವನು ಹೆತ್ತಕರುಳು*

*ಕಾಯುವದು ಹಗಲು ಇರುಳು'*[6]

(ತೇಲಾಡುವಾಗ)

ಮಗು ಅಪ್ಪಿ ತಪ್ಪಿ ತಪ್ಪು ಮಾಡಿ ಪಾತಾಳಕ್ಕೆ ಹೋದರೂ ತಾಯಿ ಮಾತ್ರ ತನ್ನ ಮಗುವನ್ನು ಹಾಗೆಯೇ ಬಿಡುವುದಿಲ್ಲ. ಆ ತಾಯಿ ಹಗಲು ಇರುಳು ಕಣ್ಣಲ್ಲಿ ಕಣ್ಣಿಟ್ಟು ಮಗುವಿನ 'ಕಾಯ'ವನ್ನು ಕಾಯುತ್ತಾಳೆ. ಕವಿ ಬೇಂದ್ರೆಗೆ ತಾಯಿ ಹೀಗೆ ಆಂತರಿಕ ಶಕ್ತಿಯಾಗಿದ್ದಾರೆ. ರಾತ್ರಿ ಕನಸಿನಲ್ಲಿ ತಮಗೆ ಕಷ್ಟ, ನೋವು ಬಂದಾಗ ಬೇಂದ್ರೆ ನೆನಸುವುದು ತಾಯಿ ಅಂಬಿಕೆಯನ್ನು ಮಾತ್ರ. ಆಕೆ ಕೂಡ ನೆನಸಿದಾಗ ಬಂದು ಕವಿ ಬೇಂದ್ರೆಗೆ ಆಂತರಿಕ ಸ್ಥೈರ್ಯವನ್ನು ತುಂಬುವ ಶಕ್ತಿಯಾಗಿದ್ದಾರೆ. ಅಂದರೆ ಒಟ್ಟಾರೆ ಕವಿ ಬೇಂದ್ರೆಯ ಕನಸು ಮನಸ್ಸಿನಲ್ಲಿಯೂ ತಾಯಿ ಅಂಬಿಕೆಯೇ ತುಂಬಿದ್ದಾರೆ.

ದಾಂಪತ್ಯದಲ್ಲಿ ವಿರಸವು ಕೂಡ ಸಮರಸದಂತೆ ಸಾಮಾನ್ಯ. ಆದರೆ ವಿರಸವೇ ಹೆಚ್ಚಾದರೆ? ದಾಂಪತ್ಯದ ಬಂಡಿ ಸಾಗಲು ಸಾಧ್ಯವಾಗುವುದಿಲ್ಲ. ಪತಿಯು ಮಗುವಾಗಿ, ಸತಿ ತಾಯಿಯಂತಹ ಸಹನೆಯ ಸೈರಣೆ ಮತ್ತು ತಾಳ್ಮೆಯನ್ನು ಬಳಸಿಕೊಂಡರೆ ದಾಂಪತ್ಯವು ಸಮರಸದಿಂದ ಕೂಡಿರುತ್ತದೆ ಎನ್ನುವುದು ಕವಿ ಬೇಂದ್ರೆಯ ಅಭಿಪ್ರಾಯವಾಗಿದೆ. ತಾಯ್ತನದ ಅಂಶಗಳು ಕೇವಲ ತಾಯಿ-ಮಗು ಸಂಬಂಧದಲ್ಲಿ ಮಾತ್ರವಲ್ಲದೆ ದಾಂಪತ್ಯದಲ್ಲೂ ಬೆಸೆದರೆ ಉತ್ತಮ ಎನ್ನುವ ಮೂಲಕ ಬೇಂದ್ರೆ ದಾಂಪತ್ಯ ಗೀತೆಗೆ ಹೊಸ ಭಾಷ್ಯವನ್ನು ಬರೆದಿದ್ದಾರೆ.

*"ಗಂಡು ದರ್ಪವ ಹರಿದು*

*ಬಿರುಸು ಬಿಂಕವ ತೊರೆದು*

*ತೋಳ ತೊಟ್ಟಿಲ ಮಗುವು ಆಗಿ ಬಂದೆ*

*ಗೊಂಬೆಮಾಡಿಸಿದಂತೆ ಆಡಿಸೆಂದೆ*

*ನಿನ್ನ ತಾಯ್ತನತದ ಸೈರಣೆಯ ವಿತರಣೆ ಬೇಕು*

*ನಿನ್ನ ತಾಳ್ಮೆಯ ಸೈಪಿನೊಂದು ಕರುಣೆಯು ಸಾಕು"*[17]

(ಮನದನ್ನೆ)

ತಾಯಿ-ಮಗುವಿನ ಸಂಬಂಧವು ಬೇಂದ್ರೆಯವರ ಬಾಳಿನ ಅವಿಭಾಜ್ಯ ಅಂಗವಾಗಿರುವಂತೆಯೇ ಬೇಂದ್ರೆಯ ಸಾಹಿತ್ಯ ಜೀವನದಲ್ಲೂ ಅದು ಪ್ರಭಾವಿಸಿದೆ. ವಿಶ್ವಮಾತೆ, ಭೂಮಾತೆ, ಭರತಮಾತೆ, ಕನ್ನಡ ತಾಯಿ ಹಾಗೂ ಜನ್ಮಕೊಟ್ಟ ತಾಯಿ – ಹೀಗೆ ಐದು ತಾಯಂದಿರ ಮಗನೆಂದು ಬೇಂದ್ರೆ ಹೇಳಿಕೊಂಡಿದ್ದಾರೆ. ಕವಿ ಬೇಂದ್ರೆಯವರ ಈ ಹೇಳಿಕೆಯೇ ವಿಶಿಷ್ಟವಾಗಿದೆ.

*"ನನ್ನ ತಾಯಿಯ ಹಾಲು ನೆತ್ತರವ ಕುಡಿದಂಥ*

*ಜೀವಂತ ಮಮತೆ ನಾನು!*

*ಈ ಐದು ಐದೆಯರೆ ಪಂಚಪ್ರಾಣಗಳಾಗಿ*

*ಈ ಜೀವ ದೇಹನಿಹನು!"*[18]

*(ನಾನು)*

"ತಾಯಿ-ಮಗುವಿನ ಸಂಬಂಧದಲ್ಲಿ ಶಾರೀರಿಕ ಏಕತೆಯು ಇರುವುದರಿಂದ ಅವರಿಬ್ಬರಲ್ಲಿ ಅತ್ಯಂತ ನಿಕಟವಾಗಿ ಸ್ಥೂಲ ಹಾಗೂ ಸ್ಪರ್ಶವೇದ್ಯ ಸಂಬಂಧವಿರುತ್ತದೆ"[18] ಎಂದು ಶ್ರೀ ಮಾತಾ ತಾಯಿ-ಮಗುವಿನ ಸಂಬಂಧವನ್ನು

ಗುರ್ತಿಸಿದ್ದಾರೆ. ತಾಯಿ ಕೆಲಸದ ಸಲುವಾಗಿ ಎಷ್ಟೇ ದೂರವಿದ್ದರೂ ಆಕೆಯ ಮನಸ್ಸೆಲ್ಲಾ ಮಗುವಿನ ಸುತ್ತವೇ ಸುತ್ತುತ್ತಿರುತ್ತದೆ. ಇಂತಹ ಕೆಲಸದಲ್ಲಿ ತೊಡಗಿರುವ ತಾಯಿಯನ್ನು 'ತಾಯಿ ಯೋಗಿನಿ'ಎಂದು ಬೇಂದ್ರೆಯವರು ಕರೆದಿದ್ದಾರೆ.

*"ಕೆಲಸದಲ್ಲಿ ಬಿಡುವಿಲ್ಲ*

*ಕೂಸಿನಲ್ಲಿ ಮನವೆಲ್ಲ*

*ತಾಯಿ ಯೋಗಿನಿ ಮೈಲಿ ದುಡಿಯುತಿಹಳು"[19]*

**(ತಾಯಿ – ಕೂಸು)**

ಬೇಂದ್ರೆ ತಾಯಿಯನ್ನು 'ತಾಯಿಯೋಗಿನಿ' ಎಂದು ಕರೆದರೆ ನವ್ಯ ಕಾಲಘಟ್ಟದ ಲಂಕೇಶ್ ತಮ್ಮ ತಾಯಿಯನ್ನು ಕಪ್ಪುನೆಲಕ್ಕೆ ಹೋಲಿಸಿದ್ದಾರೆ. ಗ್ರಾಮೀಣ ಪರಿಸರದ ಕಷ್ಟ ನಷ್ಟಗಳನ್ನು ಅನುಭವಿಸಿದ ಹೆಣ್ಣು ಲಂಕೇಶರ ಅವ್ವ. ಆಕೆಯ ಪ್ರಪಂಚ ಕೇವಲ ಅವಳ ಗಂಡ, ಮನೆ ಮತ್ತು ಮಕ್ಕಳು. ಆಕೆ ತಾನೇ ಭೂಮಿಯನ್ನು ಉತ್ತು, ಬಿತ್ತಿ ತನ್ನ ಮಕ್ಕಳನ್ನು ಜೊತೆಗೆ ಕೆಲಸಕ್ಕೆ ಬಾರದ ಗಂಡನನ್ನು ಸಾಕಿದಳು. ಆಕೆಯ ಪ್ರೀತಿಯನ್ನು ಲಂಕೇಶ್ ಕರಡಿಗೆ ಹೋಲಿಸಿದ್ದಾರೆ. ಆಕೆಗೆ ಕೆಲಸದ ನಡುವೆ ಬಿಡುವಿಲ್ಲ. ಆಕೆಗೆ ತನ್ನ ಮುಕ್ತಿಯ ಬಗ್ಗೆ ಯಾವುದೇ ಯೋಚನೆಯಿಲ್ಲ. ಅವಳ ಗಂಡ, ಮನೆ, ಮಕ್ಕಳು ಎಂದು ಸೀಮಿತವಾದ ಪ್ರಪಂಚದಲ್ಲಿ ಆಕೆಗೆ ಇದ್ಯಾವುದರ ಅವಶ್ಯಕತೆಯೂ ಇರಲಿಲ್ಲ. ಇಂತಹ ಸೀಮಿತವಾದ ಪ್ರಪಂಚದಲ್ಲಿ ಬದುಕಿ ಹಾಗೆ ಮಣ್ಣಲ್ಲಿ ಮಣ್ಣಾದವಳಿಗೆ ಕವಿ ಕೃತಜ್ಞತೆಯ ಕಣ್ಣೀರನ್ನು ಮಿಡಿದಿದ್ದಾರೆ. ಲಂಕೇಶರ ತಾಯಿಯಾಗಲಿ ಮತ್ತು ಮಗನಾದ ಕವಿ ಲಂಕೇಶ್‌ರಾಗಲಿ ನಯ ನಾಜೂಕರಲ್ಲ. ಬೇಂದ್ರೆಯವರ ತಾಯಿ ಕವನಗಳು ಆ ರೀತಿಯಾದವುಗಳಲ್ಲ. ಹೆಚ್ಚಿನವು ತಾಯಿಯನ್ನು ಸ್ತುತಿಸುವಂತಹ ಕವನಗಳು ಜೊತೆಗೆ ಆಕೆಯ ಉನ್ನತೀಕರಣವನ್ನು ತಮ್ಮದೇ ಆದ ಶಿಷ್ಟಭಾಷೆಯ ಚಮತ್ಕಾರ ಪದಗಳಿಂದ ರೂಪಿಸಿದ್ದಾರೆ.

*"ಬನದ ಕರಡಿಗೆ ನಿಮ್ಮ ಭಗವದ್ಗೀತೆ ಬೇಡ*

*ನನ್ನವ್ವ ಬದುಕಿದ್ದು*

*ಕಾಳು ಕಡ್ಡಿಗೆ, ದುಡಿತಕ್ಕೆ, ಮಕ್ಕಳಿಗೆ;*

*ಮೇಲೊಂದು ಸುರು, ಅನ್ನ, ರೊಟ್ಟಿ, ಹಚಡಕ್ಕೆ*

*ಸರೀಕರ ಎದುರು ತಲೆಯೆತ್ತಿ ನಡೆಯಲಿಕ್ಕೆ"[20]*

(ಅವ್ವ)

ಬೇಂದ್ರೆಯವರು ತಾಯಿ ಅಂಬಿಕೆಯ ಬಾಹ್ಯ ಸ್ವರೂಪಕ್ಕಿಂತ ಅವರ ಆಂತರಿಕ ಸ್ವರೂಪಕ್ಕೆ ಮಾರು ಹೋಗಿದ್ದರು. ಬೇಂದ್ರೆಯವರ ಆಂತರಿಕ ಶಕ್ತಿಯ ಮೂಲ ಪ್ರೇರಣೆ ತಾಯಿ ಅಂಬಿಕೆ. ಆದರೆ ಇಂತಹ ಶಕ್ತಿಯನ್ನು ತಿಳಿಯಬೇಕೆನ್ನುವಷ್ಟರಲ್ಲಿಯೇ ತಾಯಿ ಅಂಬಿಕೆ ಕಾಲನ ವಶವಾಗಿದ್ದಾರೆ. ತಾಯಿ ಅಂಬಿಕೆ ಕವಿ ಬೇಂದ್ರೆಗೆ ಕೇವಲ ಜನ್ಮದಾತೆಯಾಗಿರಲಿಲ್ಲ. ಬದಲಿಗೆ ಅರಿವಿನ ಮೂರ್ತಿಯಾಗಿದ್ದರು. ಇಂತಹ ಅರಿವಿನ ಶಕ್ತಿಯನ್ನು ಕವಿ ಬೇಂದ್ರೆ ಅರಗಿಸಿ ಕೊಳ್ಳಬೇಕೆನ್ನುವಷ್ಟಂಲ್ಲಿಯೇ ಆ ಶಕ್ತಿಯನ್ನಯ ಕಳೆದುಕೊಂಡಿದ್ದಾರೆ. ಇದು ಕವಿ ಬೇಂದ್ರೆಯ ಮನಸ್ಸಿಗೆ ತುಂಬಾ ನೋವನ್ನುಂಮಾಡಿದೆ.

*"ಇದ್ದಾಗ ತಿಳಿಯಲಿಲ್ಲೆನ್ನ ತಿಳಿವು।*

*ಮುದ್ದಾಡಿ ಕೊಳ್ಳುವಷ್ಟರಲಿ ಬಂದಿತಳಿವು॥*

*ಯಾವ ಜನ್ಮದಲಿನ್ನರಿಣವ ತೀರಿಸಲಿ।*

*ಯಾವ ಸೇವೆಯ ಮಾಡು ಹೆಸರ ಬೀರಿಸಲಿ॥ " 21*

(ನಲ್‌ತಾಯಿ)

ಬೇಂದ್ರೆಯವರು ತಮ್ಮ ತಾಯಿಯನ್ನು "ನಲ್‌ತಾಯಿ" ಎಂದೇ ಕರೆದಿದ್ದಾರೆ. 'ನಲ್' ಎಂಬ ಪದಕ್ಕೆ ಸಾಹಿತ್ಯದ ವಿರಾಟ ಸ್ವರೂಪದಲ್ಲಿ ಬೇಂದ್ರೆ ತಮ್ಮದೆ ಆದ ಅರ್ಥ ಸ್ವಾರಸ್ಯವನ್ನು ನೀಡುತ್ತಾರೆ. 'ನಲ್' ಬೀಜದಿಂದ ನಲಿವು = ಆನಂದ; ನಲುಮೆ = ಪ್ರೀತಿ; ನಲ್ಲ = ಸುಂದರ; ನಾಲಿಗೆ = ರಸಜ್ಞೆಯಾದ ಜಿಹ್ವೆ; (ನಾನ್ = ಆರ್ದ್ರವಾಗು) ನಲ್ಲೆವಾಲು = ಸವಿಯಾದ ಹಾಲು ಹೀಗೆ ಶಬ್ದ ಸಿದ್ಧಿಯಾಗಿದೆ. ನಲ್‌ದಲ್ಲಿ ರಸ, ಪ್ರೀತಿ, ಸೌಂದರ್ಯ, ಆನಂದಗಳು ಅಡಕವಾಗಿದೆ. ಕವಿಯ ಪ್ರತಿಭೆಯು ಪ್ರೀತಿಯ ರೀತಿ; ಕಾವ್ಯ ವಿಷಯವಾದ ಜಗತ್ತೆಲ್ಲ ಸೌಂದರ್ಯವು: ಅವುಗಳ ಅರಿವಿನ ಸಂಗಮವು ರಸವು : ಇವು ಮೂರಕ್ಕೂ ಆಧಾರವಾಗಿದ್ದುದು ಸೃಷ್ಟಿ ಸ್ಥಿತಿಲಯಗಳಿಗೆ ಬ್ರಹ್ಮಭೂತ ಆನಂದ., ಉಪನಿಷತ್ತು ವೇದಗಳಲ್ಲಿ 'ಮಧು' ಶಬ್ಧವನ್ನು ಹೀಗೆಯೇ ಬಳಸಿದುದುಂಟು. ಆದರೆ ಅದಕ್ಕೆ ನಲ್ಲದ ಮೇಲ್ಮೆ ಬರಲಾರದು. ಇದರ ಬಣ್ಣ ಬೇರೆ, ಆದರೆ ಬನ್ನ ಬೇರೆ. ಇದರ ಧ್ವನಿ ಅದಕ್ಕಿಲ್ಲ"[22]

ಬೇಂದ್ರೆಯವರ ಈ ಪದದ ವಿವರವನ್ನೇ ನಾವು ಇಟ್ಟುಕೊಂಡರೆ 'ನಲ್' ಎಂಬುದಕ್ಕೆ ಅರಿವು ಎಂದು ಅರ್ಥೈಯಿಸಬಹುದು. ಇಲ್ಲಿ ಅರಿವು ಎಂಬುದು ಕಣ್ಣಿಗೆ ಕಾಣದ್ದು ಅಮೂರ್ತವಾದ್ದು, 'ತಾಯಿ' ಮೂರ್ತವಾದದ್ದು. ಅಂದರೆ ಕಣ್ಣಿಗೆ ಕಾಣುವಂತಹದ್ದು. ಇಲ್ಲಿ ಅಮೂರ್ತದ ಎಲ್ಲಾ ಭಾವಗಳನ್ನು ಮೂರ್ತಕ್ಕೆ ಬೇಂದ್ರೆಯವರು ಆರೋಪಿಸಿದ್ದಾರೆ. ಅಂದರೆ 'ತಾಯಿ' ಎಂದರೆ ಅರಿವು. ಈ ವಿವರಗಳು ಬೇಂದ್ರೆಯವರು ತಮ್ಮ ತಾಯಿ ಅಂಬಿಕೆಯನ್ನು ಕಂಡ ಇನ್ನೊಂದು ಬಗೆಯನ್ನು ತಿಳಿಸುತ್ತದೆ.

ತಾಯಿ ಸಾವನ್ನು ಕಂಡು ಅನುತಾಪದಿಂದ ಎಷ್ಟೇ ಕಣ್ಣೀರಿಟ್ಟರೂ ತಾಯಿ ಮತ್ತೆ ಹಿಂತಿರುಗಿ ಬರಲಾರಳು. ಮತ್ತೆ ಇಂತಹ ನೂರು ದೇಹ ಎತ್ತಿ ಬಂದರೂ ವಾತ್ಸಲ್ಯ ಮಯೆ ತಾಯಿ ಸಿಗುವುದಿಲ್ಲ. 'ಬಾ ಮಗುವೆ' ಎಂದೇಳಿ ಬಳಿಗೆ ಕರೆದು ತನ್ನ ಆರ್ಶೀವಾದವನ್ನು ನೀಡಲು ಸಾಧ್ಯವಿಲ್ಲ ಎಂಬಂತಹ ನೋವಿನ ಭಾವನೆಗಳು ಕವಿಬೇಂದ್ರೆಗೆ ತಮ್ಮ ತಾಯಿ ಅಂಬಿಕೆಯ ಸಾವಿನಿಂದ ಬಂದಿದೆ.

*"ಬಿಕ್ಕೆಲ್ಲ ಬಿಕ್ಕಿದರು ನೂರಿಂಥಕಾಯ*

*ಧರಿಸಿದು ನಿನ್ನಂಥ ತಾಯ ಸಿಕ್ಕಾಳೇ?*

*ಹರಸನ್ನ 'ಬಾ ಮಗುವೆ' ಎಂದು ನಕ್ಕಾಳೇ?"*[23]

(ನಲ್‌ತಾಯಿ)

ನಿನ್ನಂಥ ತಾಯಿ ಸಿಕ್ಕಾಳೇ, ನಕ್ಕಾ ಳೇ ಎಂಬ ಪ್ರಶ್ನೆಗಳಲ್ಲಿಯೇ ಅಂಬಿಕೆಯಂತಹ ತಾಯಿ ಮತ್ತೆ ಸಿಗುವುದಿಲ್ಲ ಎಂಬ ಭಾವದ ಜೊತೆಗೆ ತಾಯಿ ಅಂಬಿಕೆಯ ಉನ್ನತವಾದ ವ್ಯಕ್ತಿತ್ವವನ್ನು ಮಗನು ಕಂಡ ಬಗೆ ಎರಡೂ ಕೂಡ ಮಿಳಿತವಾಗಿದೆ.

2006 ರಲ್ಲಿ 'ರಾಷ್ಟ್ರಕವಿ' ಎಂಬ ಬಿರುದಿಗೆ ಪಾತ್ರರಾದವರು ಜಿ.ಎಸ್.ಶಿವರುದ್ರಪ್ಪ ಇವರು ನವೋದಯ ಮತ್ತು ನವ್ಯ ಈ ಎರಡೂ ಕಾಲಘಟ್ಟದ ಸಾಹಿತ್ಯದಲ್ಲೂ ಕೃತಿ ಮಾಡಿದ್ದಾರೆ. ಬೇರೆ ಕವಿಗಳಂತೆ ಇವರ ಕಾವ್ಯ ಪ್ರಪಂಚದಲ್ಲಿ ತಾಯಿಯನ್ನು ಕುರಿತಂತೆ ಒಂದೆರಡು ಕವನಗಳಿವೆ. ಬೇಂದ್ರೆಯವರು ತಮ್ಮ ತಾಯಿ ಅಂಬಿಕೆಯನ್ನು ಕಳೆದುಕೊಂಡಾಗ ಹುಟ್ಟಿದ 'ನಲ್‌ತಾಯಿ' ಯಂತೆ ಜಿ.ಎಸ್.ಶಿವರುದ್ರಪ್ಪರವರ 'ತಾಯಿಗೆ' ಎಂಬ ಕವನದ ಸಂದರ್ಭವೂ ಕೂಡ ಒಂದೇ ಆಗಿದೆ. ಎಳೆಯ ವಯಸ್ಸಿನಲ್ಲಿಯೇ ತಾಯಿಯನ್ನು ಕಳೆದುಕೊಂಡು ಇಡೀ ಜೀವನದ ಬಿರುಗಾಳಿಗೆ ತಾಯಿಯ ಬೆಂಬಲವಿಲ್ಲದೆ ಒಬ್ಬಂಟಿಯಾಗಿ ಪಯಣವನ್ನು ಮಗು ಮಾಡುತ್ತಿದ್ದಾನೆ. ತಾಯಿ ಸತ್ತಿದ್ದಾರೆ ಎಂಬುದನ್ನು ಅರಿಯಲಾಗದ ಚಿಕ್ಕ ವಯಸ್ಸು ಆತನದು. ತಾಯಿ ಸತ್ತು ಹೋಗಿಲ್ಲ ಎಲ್ಲೋ ಹೋಗಿದ್ದಾರೆ ಎಂಬುದಾಗಿ ತಿಳಿದುಕೊಂಡಿದ್ದ ಆ ಮಗುವಿಗೆ ನಂತರ 'ನೀ ತೊರೆದು ಹೋದೆ' ಎಂಬುದು ಅರಿವಾಯಿತು. ಅಷ್ಟು ಮುಗ್ಧ ಮನಸ್ಸು ಆ ಮಗುವಿನದು.

*"ನೀ ಸತ್ತು ಹೋಗಿರುವೆ ಎಂಬುದನು ಕೇಳಿ*
*ನಾನು ನಂಬಲೆ ಇಲ್ಲ ನನ್ನೆಳವೆಯಲ್ಲಿ*
*ನಿನ್ನಲ್ಲೋ ಹೋಗಿರುವೆ*
*ಮತ್ತೆ ಬಳಿಗೆ ತರುವೆ*
*ಎಂಬ ನಂಬುಗೆಯಲ್ಲಿ ಹಲವು ದಿನ ಇದೆ*
*ಕಡೆಗೆ ನಂಬಿದೆ ನಾನು – 'ನೀ ತೊರೆದು ಹೋದೆ' !"* [24]

(ತಾಯಿಗೆ)

ಹೆತ್ತ ತಾಯಿ ಹೋದನಂತರ ಇನ್ನೊಬ್ಬ ತಾಯಿ ಆ ಮಗುವಿನ ಮನೆಯನ್ನು ತುಂಬುತ್ತಾಳೆ. ಆದರೆ ಆಕೆ ಮಗುವಿನ 'ಮನವ ತುಂಬಲೆ ಇಲ್ಲ', ಅವಳು ಕೇವಲ ಮಗುವಿಗೆ ಅನ್ನದಾತೆಯಾಗಿಯೇ ಉಳಿದುಕೊಂಡಳು. ಆದರೆ ಮಗು ತನ್ನ ಹೆತ್ತ ತಾಯಿಯಿಂದ ಪಡೆದ ಪ್ರೀತಿಯನ್ನು ಬೇರೊಬ್ಬ ತಾಯಿಯಿಂದ ಪಡೆಯಲಾಗದ್ದಕ್ಕೆ ಪ್ರತಿಕ್ರಿಯಿಸುವ ರೀತಿ ವಿಶಿಷ್ಟವಾಗಿದೆ.

*"ನೀನಿತ್ತ ಒಲವನ್ನು*
*ಆ ದಿವ್ಯಸುಧೆಯನ್ನು*
*ಪರರಿಂದ ಕಡವಾಗಿ ಪಡೆಯಬಹುದೆ?*
*ದೊರೆಯದಿರೆ ಅದಕಾಗಿ ಕೊರಗಬಹುದೆ?"* [25]

(ತಾಯಿಗೆ)

ತಾಯಿಯ ಪ್ರೀತಿಯನ್ನು ಚಿಕ್ಕ ವಯಸ್ಸಿನಲ್ಲಿ ಕಳೆದುಕೊಂಡ ಮಗುವಿನ ತೊಳಲಾಟ ಜಿ.ಎಸ್.ಶಿವರುದ್ರಪ್ಪನವರ ಕವನದಲ್ಲಿದೆ. ತಾಯಿಯ ಮಾತೃಪ್ರೇಮದಿಂದ ವಂಚಿತನಾದ ಮಗು ತನ್ನ ತಾಯಿಯ ಪ್ರೀತಿಗಾಗಿ ಹಂಬಲಿಸುವ ಚಿತ್ರಣ ಇದಾಗಿದೆ. ತಾಯಿಯ ಒಲವಿಗೆ ಸರಿಸಮಾನವಾಗಿ ಲೋಕದಲ್ಲಿ ತಾಯಿಯ ಒಲವೇ ಸರಿಯಾದ ಹೋಲಿಕೆ. ಇಂತಹ ತಾಯಿಯ ಪ್ರೀತಿಯನ್ನು ಆಸ್ವಾದಿಸಲು ಸಾಧ್ಯವಾಗದಿರುವುದಕ್ಕೆ ಮತ್ತೊಮ್ಮೆ ಮಗುವಾಗಬೇಕೆಂಬ ಆಸೆಯು ಇಲ್ಲಿ ವ್ಯಕ್ತವಾಗಿದೆ.

*"ತಾಯೊಲವೆ ತಾಯೊಲವು ಈ ಲೋಕದೊಳಗೆ*
*ಕಡಲಿಂಗೆ ಕಡಲಲ್ಲದುಂಟೆ ಹೋಲಿಕೆಗೆ!*
*ಓ ಅಮೃತಪ್ರೇಮವೇ*
*ಓ ಮಾತೃರೂಪವೇ*
*ತೀರಲಾರದ ತೃಷೆಗೆ ಮರುಜನ್ಮ ಬೇಕು*
*ಮತ್ತೊಮ್ಮೆ ಶಿಶುವಾಗಿ ನಾ ನಲಿಯಬೇಕು."* [26]

(ತಾಯಿಗೆ)

ಇಬ್ಬರು ಕವಿಗಳ ಕವನದ ಸಂದರ್ಭವು ಒಂದೇ ಆಗಿದ್ದರೂ ಕೂಡ ಅದು ವ್ಯಕ್ತವಾಗಿರುವ ರೀತಿ ವಿಭಿನ್ನವಾಗಿದೆ. ಜಿ.ಎಸ್.ಶಿವರುದ್ರಪ್ಪನವರ ಕವನದಲ್ಲಿ ಚಿತ್ರಿತವಾಗಿರುವ ತಾಯಿಯನ್ನು ಮಗು ತನ್ನ ಚಿಕ್ಕವಯಸ್ಸಿನಲ್ಲಿ ಕಳೆದುಕೊಂಡು

ತಾಯಿಯ ಪ್ರೀತಿಯಿಂದ ವಂಚಿತನಾಗಿದ್ದಾನೆ. ಆತ ದೊಡ್ಡವನಾದರೂ ತನಗೆ ತಾಯಿಯ ಪ್ರೀತಿ ಸಿಗಲಿಲ್ಲ ಎಂಬ ಕೊರಗು ಅವನಲ್ಲಿದೆ. ಆ ತಾಯಿಯ ಪ್ರೀತಿಯ ಬಗ್ಗೆ ತನ್ನ ಬಾಯಾರಿಕೆಯನ್ನು ಹಿಂಗಿಸಿಕೊಳ್ಳಲು ಮತ್ತೊಮ್ಮೆ ಶಿಶುವಾಗುವ ಬಯಕೆಯನ್ನು ಆತ ವ್ಯಕ್ತಪಡಿಸುತ್ತಾನೆ. ಇಲ್ಲಿನ ಮಗು ತಾಯಿಯನ್ನು ಚಿಕ್ಕ ವಯಸ್ಸಿನಲ್ಲಿಯೇ ಕಳೆದುಕೊಂಡಿರುವುದರಿಂದ ಪ್ರೀತಿಯನ್ನು ಪಡೆಯಲು ಹಂಬಲಿಸುವಲ್ಲಿ ಕವಿತೆ ಮುಗಿದಿದೆ. ಮಗು ಬೇರೆ ತಾಯಂದಿರನ್ನು ತನ್ನ ತಾಯೆಂದು ನೋವನ್ನು ಅನುಭವಿಸುವಷ್ಟರ ಮಟ್ಟಿಗೆ ಮಾತ್ರ ಕವಿತೆ ಮಗುವಿನ ತಾಯಿಯ ಹಂಬಲದಲ್ಲಿ ಬೆಳೆದಿದೆ. ಆದರೆ ಬೇಂದ್ರೆಯವರ ತಾಯಿ ಕವಿ ಬೇಂದ್ರೆಯವರ ಜೊತೆ ಜೀವನದ ಬಹುಪಾಲು ಹಾದಿಯನ್ನು ಸವೆಸಿದ್ದರು. ಬೇಂದ್ರೆಗೆ ತಾಯಿಯ ಪ್ರೀತಿಯಿಂದ ವಂಚಿತನಾಗುವ ಸಂಭವವೇ ಇಲ್ಲ. ತಾಯಿಯ ಪ್ರೀತಿಯನ್ನು ಯಥೇಚ್ಛವಾಗಿ ಉಂಡು ಬೆಳೆದವರು. ಕವಿ ಬೇಂದ್ರೆ ತಾಯಿಯ ಪ್ರೀತಿಯ ಜೊತೆ ಆಕೆಯ ಕಣ್ಣಿನರೆಪ್ಪೆಯ ರಕ್ಷಣೆಯಲ್ಲಿ ಆಶ್ರಯ ಪಡೆದರು. ಆಕೆ ಬೇಂದ್ರೆಯವರ ಪಾಲಿಗೆ ವಾತ್ಸಲ್ಯದ ಮೂರ್ತಿಯ ಜೊತೆಗೆ ಅರಿವಿನ ಸಾಕಾರ ಮೂರ್ತಿಯಾಗಿದ್ದರು. ತಾಯಿಯನ್ನು ಕೇವಲ ವಾತ್ಸಲ್ಯದ ಮೂರ್ತಿಯನ್ನಾಗಿಸದೆ ಅರಿವಿನ ಮೂರ್ತಿಯನ್ನಾಗಿಸಿರುವುದು ಕವಿ ಬೇಂದ್ರೆಯ ವಿಶಿಷ್ಟ ಪ್ರತಿಭೆಗೆ ಹಿಡಿದ ಕೈಗನ್ನಡಿಯಾಗಿದೆ. 'ತಾಯಿಯೇ ಮೊದಲ ಗುರು' ಎಂಬ ಮಾತಿಗೆ ಬೇಂದ್ರೆಯವರ 'ನಲ್‌ತಾಯಿ' ಮೂರ್ತಿ ರೂಪವಾಗಿದೆ.

ಬೇಂದ್ರೆಯವರನ್ನು ಅಜ್ಜಿ, ತಾಯಿಯರ ವಾತ್ಸಲ್ಯವು ಬೆಸೆದಿದ್ದರಿಂದ ಅವರ ವ್ಯಕ್ತಿತ್ವವು ಹೆಣ್ಣಿನಂತೆ ಮೃದುವಾಯಿತು. "ನನಗೆ ನೈತಿಕ ಮೊದಲಾದ ಆದರ್ಶ ಎಂಬುದೇನೂ ಇಲ್ಲ ಎಂದೆ. ಆದರೆ ನನ್ನ ತಾಯಿ ನನ್ನನ್ನು ಕಾಪಾಡುತ್ತಿದ್ದಾಳೆ. ತಾಯಿಗೆ ಕೆಡಕೆನಿಸುವಂಥ ಯಾವುದನ್ನೂ ಮಾಡಬಾರದೆಂದು ನನ್ನ ಆತ್ಮ ಎಚ್ಚರವಾಗಿರುತ್ತದೆ. ತಾಯಿ ಎಂಬ ಸೂತ್ರದಲ್ಲೇ ನನ್ನ ಜೀವನ ಪೋಣಿಸಿದೆ. ನನ್ನ ತಾಯಿ, ಧಾರವಾಡದ ನಗರದೇವತೆ 'ಧಾರವಾಡದ ತಾಯಿ'. 'ಕನ್ನಡ ತಾಯಿ', ಭಾರತಮಾತೆ', ನಂತರ ಇದೀಗ ಅರವಿಂದಾಶ್ರಮದ 'ಮದರ್' ಹೀಗೆ ಮಾತೃ ಪ್ರೇಮದ ಆಕಾರ, ವಿಕಾರ ಪ್ರಕಾರಗಳಿಂದ ನನ್ನ ಕಾವ್ಯ ಓತಪ್ರೋತವಾಗಿದೆ"[27] ಎಂದು ಬೇಂದ್ರೆಯವರು ಹೇಳಿಕೊಂಡಿದ್ದಾರೆ. ಬೇಂದ್ರೆಯವರ ಕಾವ್ಯದ ಕೇಂದ್ರ ನೆಲೆ ತಾಯಿ. ಈ ತಾಯಿಯ ಪ್ರಭಾವ, ಪ್ರೇರಣೆಯಿಂದಲೇ ತಮ್ಮ ಕಾವ್ಯದ ವಿವಿಧ ಅಂಶಗಳಲ್ಲಿ ತಾಯಿಯ ಕಲ್ಪನೆಯನ್ನು ಆರೋಪಿಸಲಾಯಿತು. ಕನ್ನಡ ಸಾಹಿತ್ಯದಲ್ಲಿ ಮಾತೃ ಪ್ರತಿಮೆಯು ಕೇಂದ್ರಿತ ನೆಲೆಯಲ್ಲಿ ಮೂಡಿ ಬಂದಿರುವುದು ಮೊಟ್ಟ ಮೊದಲ ಬಾರಿಗೆ ಬೇಂದ್ರೆಯವರಲ್ಲಿ ಮಾತ್ರ. ಅವರ ಕಾವ್ಯದ ಮೂಲಸೆರೆ ಈ ಮಾತೃತ್ವದ ಪ್ರತಿಮೆ ಎಂದರೆ ಅತಿಶಯೋಕ್ತಿಯಲ್ಲ. ಬೇಂದ್ರೆಯವರ ಇಡೀ ಕಾವ್ಯ ಪ್ರಪಂಚವನ್ನು ಈ ತಾಯಿ ಎಂಬ ಶಕ್ತಿಯು ಪ್ರಭಾವಿಸಿದೆ. ತಾಯಿಯೆಂದರೆ ಬೇಂದ್ರೆಯವರ ಪಾಲಿಗೆ ಭರವಸೆ ಮತ್ತು ವಿಶ್ವಾಸದ ಶಕ್ತಿಯಾಗಿದ್ದರು. ಆದ್ದರಿಂದಲೇ ಪ್ರಕೃತಿ, ಭೂಮಿಯಲ್ಲೂ ಜೊತೆಗೆ ಭಾರತ, ಕರ್ನಾಟಕ, ಧಾರವಾಡದಂತಹ ಪ್ರದೇಶಗಳಲ್ಲೂ ತಾಯಿ ರೂಪವನ್ನೇ ಬೇಂದ್ರೆ ಕಂಡರು. ಹೆತ್ತ ತಾಯಿಯನ್ನು ವಾತ್ಸಲ್ಯದ ಮೂರ್ತಿಯಾಗಿ, ಅರಿವಿನ ಶಕ್ತಿಯಾಗಿ ಕಂಡು ತಮ್ಮ ಮಾತೃ ಅನುಭವವನ್ನು ತಮ್ಮ ಸಾಹಿತ್ಯ ಕೃತಿಯಲ್ಲೂ ಪಸರಿಸಿದ ರೀತಿ ಇಡೀ ಕನ್ನಡ ಸಾಹಿತ್ಯದಲ್ಲೇ ಅನನ್ಯವಾದದ್ದಾಗಿದೆ.

# ಅಧ್ಯಾಯ ಮೂರು

## ಬೇಂದ್ರೆ ಯವರ ಕಾವ್ಯದಲ್ಲಿ ಭೂಮಿತಾಯಿ

ಋಗ್ವೇದದ ಕಾಲದಿಂದಲೂ ಭೂಮಿಯ ಆರಾಧನೆಯ ಪದ್ಧತಿ ಇದೆ. ಇಲ್ಲಿ ಕೇವಲ ಭೂಮಿ ತಾಯಿ ಮಾತ್ರ ಆರಾಧನೆಗೆ ಒಳಗಾಗಿಲ್ಲ. ಜೊತೆಗೆ ತಂದೆ ದ್ಯಾವಾನು ಆರಾಧನೆಗೆ ಪಾತ್ರನಾಗಿದ್ದಾನೆ. ದ್ಯಾವಾ ಪೃಥ್ವಿ ಎಂಬ ದೇವತಾ ಜೋಡಿಯನ್ನೇ ಋಗ್ವೇದದಲ್ಲಿ ಹೆಚ್ಚಾಗಿ ಆರಾಧಿಸಲಾಗಿದೆ. ಈ ಇಬ್ಬರೇ ಈ ಜಗದ ರಕ್ಷಕರು, ನಿಯಂತ್ರಕರು ಎಲ್ಲವೂ ಆಗಿದ್ದಾರೆ.

'ಈ ಇಬ್ಬರೂ ದ್ಯಾವಾ ಪೃಥ್ವಿಗಳು ಋತುವನ್ನು ಅನುಕರಿಸುವವರು. ಎಲ್ಲರಿಗೂ ಉಪಕಾರಿಗಳು. ಧರ್ಮ ಪಾಲಕರು. ಅಂತರಿಕ್ಷದ ಕವಿಗೆ (ಅಗ್ನಿಗೆ) ಆಶ್ರಯದಾತರು. ಒಳ್ಳೆಯ ಸೃಷ್ಟಿಗೆ ಕಾರಣರಾದ ಭೂಮಿ ಆಕಾಶಗಳು ಮಧ್ಯದಲ್ಲಿ ನಿಯಮಾನುಸಾರವಾಗಿ ಸೂರ್ಯನು ಸಂಚರಿಸುತ್ತಾನೆ'.[1]

ಈ ರೀತಿಯಾಗಿ ಭೂಮಿ ತಾಯಿಯ ಆರಾಧನೆಯ ಪ್ರಾಚೀನ ಕಾಲದಿಂದಲೂ ಭಾರತೀಯ ಧಾರ್ಮಿಕತೆಯಲ್ಲಿ ಒಂದಾಗಿ ಹೋಗಿದೆ. ಭಾರತದಲ್ಲಿ ಭೂಮಿ ತಾಯಿಯ ಆರಾಧನೆಯು ಪ್ರಮುಖವಾಗಿತ್ತು. ಆದರೆ ಉತ್ತರದಿಂದ ದಾಳಿಕೋರರು ಬಂದ ನಂತರ ಇಲ್ಲಿನ ಆರಾಧನೆಯು ಬದಲಾಯಿತು. ಅವರು ಪಿತೃ ಪ್ರಧಾನ ಕುಟುಂಬ ಪದ್ಧತಿಯವರಾದ್ದರಿಂದ ಭಾರತದಲ್ಲಿಯೂ ಅವರು ಪಿತೃಪ್ರಧಾನ ದೈವವನ್ನು ಪೂಜಿಸಲು ಆರಂಭಿಸಿದರು. ಹೀಗೆ ಭೂಮಿ ತಾಯಿಯ ಆರಾಧನೆಯು ಸಂಪೂರ್ಣವಾಗಿ ಮಾಯವಾಗದೆ ಇದ್ದರೂ ತನ್ನ ಪ್ರಖರತೆಯನ್ನು ಕಳೆದುಕೊಂಡಿತು ಎಂದು ಖ್ಯಾತ ಪುರಾಣ ಶಾಸ್ತ್ರಜ್ಞ ಹೆನ್ರಿಕ ಜಿಮ್ಮರ ಅಭಿಪ್ರಾಯ ಪಡುತ್ತಾರೆ.

ಭೂಮಿ ತಾಯಿಯು ಸಮೃದ್ಧತೆ, ಸೃಷ್ಟಿಗೆ ಸಂಕೇತವಾಗಿದ್ದಾಳೆ. ಆಕೆ ಭೂಮಿ ಮೇಲಿನ ಎಲ್ಲಾ ಜೀವಿಗಳ ರಕ್ಷಕಳೂ ಹೌದು. ನಾಶಕಳೂ ಹೌದು. ಮಗು ಜನ್ಮ ತಾಳುವುದು ಈ ಭೂಮಿತಾಯಿಯ ಮಡಿಲಲ್ಲಿಯೇ ಹಾಗೆ ವ್ಯಕ್ತಿ ಸತ್ತ ನಂತರ ಈ ಭೂಮಿ ತಾಯಿಯ ಮಡಿಲಿಗೇ ಹಿಂತಿರುಗುತ್ತಾನೆ. ಹೀಗೆ ಈ ಪ್ರಪಂಚದ ಜೀವಿಯ ಆದಿ ಎಲ್ಲಿಯೋ ಅಲ್ಲಿಯೇ ಅಂತ್ಯ ಕೂಡ ಇದೆ. ಭೂಮಿ ತಾಯಿ ವಾತ್ಸಲ್ಯದ ಮೂರ್ತಿ. ಜೊತೆಗೆ ಆಕೆ ತನ್ನ ಒಡಲಲ್ಲಿ ತನ್ನ ಭಯಾನಕವಾದ ಕ್ರೌರ್ಯದ ಮುಖವನ್ನು ಸಹ ಹುದುಗಿಸಿಟ್ಟುಕೊಂಡಿದ್ದಾಳೆ.

19ನೇ ಶತಮಾನದ ಇಂಗ್ಲೀಷ್ ಶಿಕ್ಷಣದಿಂದಾಗಿ ನಮಗೆ ಹೊಸದೊಂದು ಜೀವನ ಮನೋಧರ್ಮ ಮತ್ತು ಹೊಸ ಸಾಹಿತ್ಯ ಜಗತ್ತಿನ ಪರಿಚಯವಾಯಿತು. ಷೇಕ್ಸಪಿಯರ್, ವರ್ಡ್ಸ್‌ವರ್ತ್, ಷೆಲ್ಲಿ, ಮಿಲ್ಟನ್, ಯೂರಿಪಿಡೀಸ್, ಸಪೋಕ್ಲೀಸ್, ಟಾಲ್‌ಸ್ಟಾಯ್ ಮೊದಲಾದವರ ಸಾಹಿತ್ಯವು ಈ ಇಂಗ್ಲೀಷ್ ಶಿಕ್ಷಣದ ಸಹಾಯದಿಂದ ಆಗಿನ ಭಾರತೀಯರಿಗೆ ದೊರೆಯಿತು. ಇದರಿಂದ ಅನೇಕ ಪಾಶ್ಚಾತ್ಯ ವಿಚಾರಧಾರೆಗಳು, ಸಿದ್ಧಾಂತಗಳು ಆಗಿನ ಭಾರತೀಯರ ಕವಿ ಮನಸ್ಸನನ್ನು

ಆಕರ್ಷಿಸಿತು. ಸಹಜವಾಗಿಯೇ ಅದು ನಮ್ಮ ಸಾಹಿತ್ಯದ ಮೇಲೆ ಪ್ರಭಾವವನ್ನು ಬೀರಿತು.

ಹಳೆಗನ್ನಡ ಸಾಹಿತ್ಯದಲ್ಲಿ ಪ್ರಕೃತಿ ವರ್ಣನೆಯು ಅಷ್ಟಾದಶ ವರ್ಣನೆಗಳ ಭಾಗವಾಗಿ ಮೂಡಿಬಂದಿತು. ಈ ರೀತಿಯ ಪ್ರಕೃತಿ ವರ್ಣನೆಯ ಭಾಗಗಳು ಅಷ್ಟಾದಶ ವರ್ಣನೆಗಳಲ್ಲಿ ಹಾಗೂ ಕವಿ ಸಮಯಗಳಲ್ಲಿ ಮಾತ್ರ ಹಳೆಗನ್ನಡ ಕಾವ್ಯದಲ್ಲಿ ಮೂಡಿ ಬರುತ್ತಿತ್ತು. ಆಗಿನ ಕಾವ್ಯದಲ್ಲಿ ಸೂರ್ಯೋದಯ ವರ್ಣನೆ, ಚಂದ್ರೋದಯ ವರ್ಣನೆ , ಸಮುದ್ರದ ವರ್ಣನೆ, ಸರೋವರದ ವರ್ಣನೆಗಳು ಅನಿವಾರ್ಯ ಎಂಬಂತೆ ಕಾವ್ಯದಲ್ಲಿ ಮೂಡಿಬಂದವು. ಇದರ ಹೊರತು ಬೇರೆ ಸೃಜನ ಶೀಲತೆಗೆ ಪ್ರಕೃತಿ ವರ್ಣನೆ ಸಾಮಗ್ರಿಯಾಗಲೇ ಇಲ್ಲ.

ಆದರೆ ಇಂಗ್ಲೀಷಿನ ರೊಮ್ಯಾಂಟಿಕ್ ಕಾಲದ ಪ್ರಕೃತಿ ನಮ್ಮ ನವೋದಯ ಕಾಲದ ಕವಿಗಳಿಗೆ ಸ್ಫೂರ್ತಿಯಾಯಿತು. ಆಗ ಅವರು ಹಳಗನ್ನಡ ಸಾಹಿತ್ಯದ ಜಡವಾದ ಪ್ರಕೃತಿ ವರ್ಣನೆಯನ್ನು ಬದಿಗೊತ್ತಿ ಇಂಗ್ಲೀಷಿನ ರೊಮ್ಯಾಂಟಿಕ್ ಪ್ರಕೃತಿ ವರ್ಣನೆಯನ್ನು ಅಪ್ಪಿಕೊಂಡರು. ನಿಸರ್ಗ ಮತ್ತು ಮಾನವ ಒಂದೇ ಎಂದು ಹೇಳಿದವನು ವರ್ಡ್ಸ್‌ವರ್ತ್. ಪ್ರಕೃತಿಯನ್ನು ವಿಶಿಷ್ಟವಾಗಿ ಜೀವಂತಿಕೆಯ ಪ್ರತೀಕವಾಗಿ ನೋಡಿದ ಕೀರ್ತಿ ವರ್ಡ್ಸ್‌ವರ್ತ್ ಸಲ್ಲಬೇಕು. ಪ್ರಕೃತಿ ವರ್ಡ್ಸ್‌ವರ್ತ್ ಪಾಲಿಗೆ ಜಡವಾಗಿರಲಿಲ್ಲ. ಬದಲಿಗೆ ಅವನ ಗುರು, ಮಾರ್ಗದರ್ಶಕ, ಆತ್ಮಕ್ಕೆ ಶಕ್ತಿಯನ್ನು ನೀಡುವ ಅದಮ್ಯ ಶಕ್ತಿಯಾಗಿತ್ತು. 'The nurse, the guide, the guardian of my heart and soul of any moral being"[2]

ವರ್ಡ್ಸ್‌ವರ್ತ್‌ನ ಪ್ರಕೃತಿಯನ್ನು ಕುರಿತಾದ ಈ ಧೋರಣೆಯೇ ನಮ್ಮ ನವೋದಯ ಕವಿಗಳಿಗೆ ಪ್ರೇರಕವಾಯಿತು. ಅಲ್ಲಿಯವರೆಗೂ ಕಥೆಯ ಭಾಗವಾಗಿ ಬರುತ್ತಿದ್ದ ಪ್ರಕೃತಿ ವರ್ಣನೆ ನವೋದಯ ಕಾಲದಲ್ಲಿ ತಾನೇ ಕಾವ್ಯದ ಕೇಂದ್ರವಾಯಿತು. ಕವಿಯು ತನ್ನ ಅಂತರಂಗದ ಮಾತುಗಳನ್ನು ಪ್ರಕೃತಿಯ ಜೊತೆ ಹೇಳುವ ಪರಿಪಾಠ ಈ ನವೋದಯ ಕಾಲದಲ್ಲಿ ಮೂಡಿ ಬಂತು. ಹೀಗೆ ನವೋದಯ ಕಾಲದಲ್ಲಿ ಪ್ರಕೃತಿ ವರ್ಣನೆಯು ವಿಶಿಷ್ಟ ರೂಪವನ್ನು ಪಡೆಯಿತು. ಕುವೆಂಪು, ಬೇಂದ್ರೆ, ಪು.ತಿ.ನ. ಕೆ. ಎಸ್. ನರಸಿಂಹ ಸ್ವಾಮಿ ಮೊದಲಾದ ನವೋದಯದ ಕವಿಗಳು ಪ್ರಕೃತಿಯನ್ನು ತಮ್ಮ ಕಾವ್ಯದಲ್ಲಿ ಸಮರ್ಥವಾಗಿ ಬಳಸಿ ಕೊಂಡರು. ಕುವೆಂಪು ಪ್ರಕೃತಿಯನ್ನು ಪ್ರಕೃತಿಯಾರಾಧನೆಯೇ ಪರಮನಾರಾಧನೆ ಎಂಬಂತೆ ಚಿತ್ರಿಸಿದರೆ, ಪು.ತಿ.ನ. ಪ್ರಕೃತಿಯನ್ನು ನಿಗೂಢವಾಗಿಯೇ ಚಿತ್ರಿಸುತ್ತಾರೆ. ಆದರೆ ನವೋದಯದ ಇನ್ನಿಬ್ಬರು ಪ್ರಮುಖ ಕವಿಗಳಾದ ಬೇಂದ್ರೆ ಮತ್ತು ಕೆ.ಎಸ್. ನರಸಿಂಹಸ್ವಾಮಿಯವರು ಪ್ರಕೃತಿಯನ್ನು ತಾಯಿ ಗುಣಗಳಿಂದ ನೋಡಿದರು. ಯಾವಾಗ ಬೇಂದ್ರೆ ತಮ್ಮ ಕವಿತೆಗಳಲ್ಲಿ ಪ್ರಕೃತಿಯನ್ನು ಮತ್ತು ಅದರ ಒಂದು ಭಾಗವಾಗಿರುವ ಭೂಮಿಯನ್ನು 'ತಾಯಿ' ಎಂದು ಕರೆಯುತ್ತಾರೋ ಆಗ ಅವುಗಳಿಗಿರುವ ಜಡತ್ವವು ನಾಶವಾಗಿ ಚೈತನ್ಯವು ಆರೋಪಿತವಾಗಿ ಬಿಡುತ್ತವೆ. ಬೇಂದ್ರೆಯವರದ್ದು ಸ್ತ್ರೀ ಪೋಷಿತ ಬಾಲ್ಯವಾದ್ದರಿಂದ ಹೆಣ್ಣನ್ನು ಸಹ ತಾಯಿಯೆಂದೇ ನೋಡುತ್ತಾರೆ. ತನ್ನ ಸಖಿಯಲ್ಲಿಯೂ ಸಹ ಅವರು ತಾಯಿಯ ಗುಣವನ್ನು ಬಯಸುತ್ತಾರೆ ಎಂಬುದನ್ನು ನಾವು ಈ ಹಿಂದೆಯೇ ಒಂದು ಅಧ್ಯಾಯದಲ್ಲಿ

ಗಮನಿಸಿದ್ದೇವೆ. ಒಟ್ಟಾರೆ 'ತಾಯಿ' ಎನ್ನುವ ಸೂತ್ರವು ಬೇಂದ್ರೆಯವರ ಇಡೀ ಕಾವ್ಯ ಪ್ರಪಂಚವನ್ನು ಕ್ರಮಬದ್ಧವಾಗಿ ಬೆಸೆದಿತ್ತು.

ಬೇಂದ್ರೆ ಯಾವತ್ತೂ ಭೂಮಿ ಎಂದರೆ ಬರೀ ಮಣ್ಣು ಎಂದು ನೋಡಿದವರಲ್ಲ. ಹಾಗೆ ನೋಡುವವರನ್ನು ಬೇಂದ್ರೆ ವಿರೋಧಿಸುತ್ತಾರೆ. ಆ ರೀತಿ ಭೂಮಿ ಎಂದರೆ ಬರೀ ಮಣ್ಣು ಎಂದು ಭಾವಿಸುವುದರಿಂದ ಅಲ್ಲಿ ಪ್ರೀತಿ ಹುಟ್ಟಲು ಸಾಧ್ಯವಿಲ್ಲ. ಅಲ್ಲಿ ಪ್ರೀತಿಯಿಲ್ಲ ಎಂದ ಮೇಲೆ ಕ್ರೌರ್ಯವು ತಾಂಡವವಾಡುತ್ತದೆ. ಇದನ್ನು ಅರಿತ ಬೇಂದ್ರೆ 'ಇಳೆಯಂದರೆ ಬರಿ ಮಣ್ಣಲ್ಲ' ಎಂಬ ಭಾವನೆ ವ್ಯಕ್ತಿಗಳಿಗೆ ಬಂದಾಗ ಒಂದು ವಿಶಿಷ್ಟವಾದ ಸಂಬಂಧ ಮೂಡುತ್ತದೆ ಎನ್ನುತ್ತಾರೆ. ಆ ರೀತಿಯ ಸಂಬಂಧವನ್ನು ಸಹ ಬೇಂದ್ರೆಯವರು ಮನುಷ್ಯರಲ್ಲಿ ನಿರೀಕ್ಷಿಸುತ್ತಿದ್ದಾರೆ. ಭೂಮಿಯ ಶಕ್ತಿ ಚೈತನ್ಯಗಳು ನಮ್ಮ ಅರಿವಿಗೆ ಬರುವುದು ಈ ಭಾವನೆಗಳು ನಮ್ಮ ಮನಸ್ಸಿನಲ್ಲಿ ಮೂಡಿದಾಗ ಮಾತ್ರ.

*" ನಂದಾದೀಪದ ನಡೆ ಮಾಡಗಳೇ ಸಂಚರಿಸುವ ಹಾಗೆ*
*ಜೀವ ಜೀವಗಳ ಕಾರ್ತಿಕೋತ್ಸವವು ಮೊದಲಾಗಲಿ ಮೇಗೆ*
*ಋತುಗಳು ನಡೆಸಲಿ ರಿಂಗಣ ಕುಣಿತ*
*ಜೀವ ನುಡಿಸುತ್ತಿವೆ ವೀಣಾ ಕುಣಿತ ಕ್ವಣಿತ*
*ಮಾಲೆಯು ಕೊರಳಿಗೆ ಜೋತಿರುವಂತೆ ಹೃದಯಕೆ ಬಂದಾತು*
*ಸುಗ್ಗಿಯು ನೆಲವನೆ ಸುತ್ತುತಿರಲಿ ಮಧುಲೀಲೆಗೆ ಸೋತು "* [3]

(ಇಳೆ ಎಂದರೆ ಬರಿ ಮಣ್ಣಲ್ಲ)

ಬೇಂದ್ರೆಯವರು ರಚಿಸಿರುವ ಭೂಮಿತಾಯಿಯನ್ನು ಕುರಿತು ಪದ್ಯಗಳಲ್ಲಿ ನಾವು ಎರಡು ಭಿನ್ನ ಧಾರೆಗಳನ್ನು ಗಮನಿಸಬಹುದು. ಈಗಾಗಲೇ ನಾವು ಚರ್ಚಿಸಿರುದಂತೆ ಭೂಮಿತಾಯಿಗೆ ವಾತ್ಸಲ್ಯದ ಮುಖ ಮತ್ತು ಕ್ರೌರ್ಯದ ಮುಖ ಎಂಬ ಎರಡು ಮುಖಗಳಿವೆ. ಬೇಂದ್ರೆಯವರ ಕಾವ್ಯದಲ್ಲಿ ಭೂಮಿತಾಯಿಯ ಈ ಎರಡು ಮುಖಗಳ ದರ್ಶನವಾಗುತ್ತದೆ.

ಭೂಮಿತಾಯಿಯ ವಾತ್ಸಲ್ಯವನ್ನು ಕಂಡ ಕವಿ ಬೇಂದ್ರೆ ಸೋತು ಹೋಗಿದ್ದಾರೆ. ಭೂಮಿತಾಯಿಯ ಸಮೃದ್ಧತೆಯನ್ನು ನೋಡುವುದೇ ಕಣ್ಣಿಗೆ ಒಂದು ರೀತಿಯ ಆಪ್ಯಾಯಮಾನವಾದ ಸುಖವುಂಟಾಗುತ್ತದೆ. ಆ ತಾಯಿಯ ಉದ್ದವಾದ ತೊಡೆಯಲ್ಲಿ ಕವಿ ಬೇಂದ್ರೆ ಸುಖವಾಗಿ ನಿದ್ದೆ ಹೋಗಿದ್ದಾರೆ. ಹೆತ್ತ ತಾಯಿಯ ಮಡಿಲಂತೆ ಭೂಮಿ ತಾಯಿಯ ಮಡಿಲೂ ಕೂಡ ನೆಮ್ಮದಿಯ ಕೇಂದ್ರವಾಗಿದೆ. ಒಟ್ಟಾರೆ ವಾತ್ಸಲ್ಯ ಭಾವದ ಮೂರ್ತಿಯಾಗಿ 'ಭೂಮಿತಾಯಿ' ಇಲ್ಲಿ ಕಾಣಿಸಿಕೊಂಡಿದ್ದಾಳೆ.

*'ಮೈ ತುಂಬ ಬಾಯಿ ನೀನು*
*ತುಟಿ ಮುದ್ದು ನನ್ನ ಪಾಲು*
*ಎದೆಯೊಳ ಮೊಲೆಯು ನೀನು*
*ಮೈತುಂಬ ನನಗೆ ಹಾಲು*
*ಕಂಡಲ್ಲಿ ನಿನ್ನ ಮುಖವು*
*ಕಣ್ತುಂಬ ನನಗೆ ಸುಖವು*
*ನೆಲದುದ್ದ ತೊಡೆಯು ನಿನಗೆ*
*ಮನಸಾರೆ ನಿದ್ದೆ ನನಗೆ'*

(ಭೂಮಿತಾಯಿ)

ಭೂಮಿ ಎಂಬ ಗ್ರಹವು ಸೂರ್ಯನ ಸುತ್ತ ತಿರುಗುತ್ತದೆ ಎಂಬುದು ವೈಜ್ಞಾನಿಕವಾಗಿ ಸಿದ್ಧವಾದ ಸತ್ಯ. ಭೂಮಿ ತಿರುಗುತ್ತಿದ್ದರೂ ಭೂಮಿತಾಯಿ ಇಡೀ ಭೂಮಿಯನ್ನು ಆಕ್ರಮಿಸಿರುವುದಂತೂ ಸತ್ಯ. ವ್ಯಕ್ತಿ ಜೀವನದಲ್ಲಿ ತಪ್ಪಿ ನಡೆದರೆ ಬೇರೆಯೆಲ್ಲೂ ಆತನಿಗೆ ನೆಲೆ ಸಿಗುವುದಿಲ್ಲ. ಭೂಮಿತಾಯಿಯ ಮಡಿಲಲ್ಲೇ ಆತ ನೆಲೆಯನ್ನು ಕಂಡುಕೊಳ್ಳಬೇಕು.

*'ನೀ ತಿರುಗುತ್ತಿದ್ದರೇನು*

*ನೀನಿಲ್ಲದೆಡೆಯು ಇಲ್ಲ*

*ನಾ ತಪ್ಪಿ ನಡೆದರೇನು*

*ನೆಲೆ ಬೇರೆ ಕಾಲಿಗಿಲ್ಲ'*

(ಭೂಮಿತಾಯಿ)

ಭೂಮಿತಾಯಿಯ ತೊಡೆಯಲ್ಲಿ ಸುಖವಾಗಿ ನಿದ್ದೆ ಹೋಗಿರುವ ಬೇಂದ್ರೆಗೆ ಭೂಮಿ ತಾಯಿಯ ಒಡಲಲ್ಲಿರುವ ಜ್ಞಾನದ ಸಂಕೇತವಾದ ಬೆಳಕಿನ ಅರಿವಿಲ್ಲ. ಭೂಮಿತಾಯಿ ತನ್ನ ಒಡಲಿನಲ್ಲಿ ಬೆಳಕಿನ ರೂಪದಲ್ಲಿ ಜ್ಞಾನವನ್ನು ಅಡಗಿಸಿಕೊಂಡಿದ್ದಾಳೆ. ಆ ಭೂಮಿತಾಯಿ ಈ ಬೆಳಕನ್ನು ಹೊರ ಹಾಕಿದಾಗ ಆ ತಾಯಿಯ ಮಕ್ಕಳು ಅದನ್ನು ಪಡೆಯಲು ಸಾಧ್ಯವಾಗುತ್ತದೆ. ತಾಯಿಯ ಜ್ಞಾನವನ್ನು ಮಕ್ಕಳು ಪಡೆದು ಜ್ಞಾನವಂತರಾದಾಗ ತಾಯಿಗೆ ಹೆಚ್ಚಿನ ಸಂತೋಷವಾಗುತ್ತದೆ. ಈ ಬೆಳಕಿಗಾಗಿಯೇ ಇಡೀ ಜಗತ್ತು ಹಾತೊರೆಯುತ್ತಿದೆ. ಇದಕ್ಕೆ ಬೇಂದ್ರೆ ಕೂಡ ಹೊರತಾಗಿಲ್ಲ. 'ಬೆಳಕಾಗಲೆಮ್ಮ ಬದುಕು' ಎಂದು ಬೇಂದ್ರೆಯವರು ಆಶಿಸುತ್ತಿದ್ದಾರೆ.

*'ಓ ತಾಯಿ ನೆಲವೆ ನಿಲವೆ*
*ತಮ್ ಬೆಳಕು ಹೊಮ್ಮಲಿನ್ನು*
*ನಮ್ ಮೈಯು ಬೆಳಕುದುಂಬಿ*
*ನೀನಾಗ ನಲಿವೆ ಗೆಲಿವೆ*
*ಯಾ ಬಣ್ಣವಿದ್ದರೇನು*
*ಯಾಕಣ್ಣ ಆದರ ಮಾತು*
*ಬೆಳಕಾಗಲೆಮ್ಮ ಬದುಕು'*

(ಭೂಮಿತಾಯಿ)

ಬೇಂದ್ರೆಯವರ ಕಾವ್ಯ ಪ್ರಪಂಚದಲ್ಲಿ ಶ್ರಾವಣದ ಕವಿತೆಗಳಿಗೆ ವಿಶೇಷವಾದ ಸ್ಥಾನವಿದೆ. ಶ್ರಾವಣ ಮಾಸವನ್ನು ಬೇಂದ್ರೆಯವರು ತಮ್ಮ ಕಾವ್ಯದಲ್ಲಿ ವಿಶಿಷ್ಟವಾಗಿ ಬಳಸಿಕೊಂಡಿದ್ದಾರೆ. ಶ್ರಾವಣ ಮಾಸವು ಬೇಂದ್ರೆಯ ಅನೇಕ ಪದ್ಯಗಳಲ್ಲಿ ಕಾವ್ಯದ ನಾಯಕನಾಗಿ ಮೆರೆದಿದೆ. ಆದ್ದರಿಂದಲೇ ಕನ್ನಡ ನಾಡಿನ ಜನತೆ ಬೇಂದ್ರೆಯವರನ್ನು 'ಶ್ರಾವಣದ ಕವಿ' ಎಂದು ಕರೆದು ಗೌರವಿಸಿದ್ದಾರೆ. ಎಲ್ಲಾ ಋತುಗಳಿಗಿಂತ ಬೇಂದ್ರೆಯವರಿಗೆ ಶ್ರಾವಣ ಮಾಸವು ಅತ್ಯಂತ ಪ್ರಿಯವಾದ ಮಾಸವಾಗಿದೆ. ಇದಕ್ಕೆ ಕಾರಣವನ್ನು ಬೇಂದ್ರೆಯವರೇ ಹೀಗೆ ಸೂಚಿಸಿದ್ದಾರೆ. "ವರ್ಷ ವರ್ಷಕ್ಕೂ ಹೊಸತನ ತರುವುದು ವರ್ಷಾಕಾಲ. ಕೆಲವರು ತಮ್ಮ ವಸಂತ ಇಳಿಸುತ್ತಾರೆ. ಕೆಲವರು ಚಳಿಗಾಲದ ಲೆಕ್ಕವನ್ನು ಇಡಬಹುದು. ನನಗೆ ಶ್ರಾವಣ ಹೊಸತನವನ್ನು ತರುತ್ತದೆ. ಹರಿಹರರಿಬ್ಬರಿಗೂ ಪ್ರಿಯವಾದ ಈ ತಿಂಗಳು ಶೃತಿಕೃತಿಗಳ ಪುಣ್ಯ ಲಭಿಸುವ ಕಾಲ, ಅದು ಶ್ರೀ ಅರವಿಂದರ ಮಾಸವೂ ಹೌದು.'[7]

ಶ್ರಾವಣ ಮಾಸವು ಸಾಮನ್ಯರ ಪಾಲಿಗೆ ಕೇವಲ ಬೇರೆಲ್ಲಾ ಮಾಸಗಳಂತೆ ಒಂದು ಮಾಸ. ಆದರೆ ಬೇಂದ್ರೆಯವರ ಪಾಲಿಗೆ ಭೂಮಿತಾಯಿಯ ಮಗ. ಅವನ ತಂದೆ ಮುಗಿಲರಾಯ. ಹೀಗೆ ಬೇಂದ್ರೆಯವರು ಭೂಮಿತಾಯಿಗೂ ಶ್ರಾವಣ ಮಾಸಕ್ಕೂ ತಾಯಿ – ಮಗನ ಸಂಬಂಧವನ್ನು ಬೆಸೆದಿದ್ದಾರೆ.

*"ಮೋಡಗವಿದ ಕಣ್ಣಿನವನು*
*ಮುದಿಯ ತಂದೆ ಮುಗಿಲರಾಯ*
*ನಿನ್ನನ್ನೇ ಬಯಸಿದಾ*
*ಕಣ್ಣು ಕೆನ್ನೆ ತೋಯ್ಸಿದಾ*
*ಬಿಸಿಲ ಹಣ್ಣು ತಿಂದುಹೊತ್ತು*
*ಹೆತ್ತ ನಿನ್ನ ಭೂಮಿತಾಯಿ*
*ಪಾಪ, ನಿನ್ನ ನೆನಸಿತು."*

(ಶ್ರಾವಣ)

ಮಗ ಬಂದ ಸಂದರ್ಭದಲ್ಲಿ ಭೂಮಿತಾಯಿಯ ಸೌಂದರ್ಯವನ್ನು ಕವಿ ಹೀಗೆ ವರ್ಣಿಸುತ್ತಾರೆ.

*'ಹೂವ ಹಡಲಿಗೆಯನ್ನು ಹೊತ್ತ*

*ಭೂಮಿತಾಯಿ ಜೋಗಿತಿ*

*ಮೈತುಂಬಿ ಕುಣಿಯುತಿಹಳ*

*ನಂತ ಕಾಲವೀ ಗತೀ."*

(ಶ್ರಾವಣದ ವೈಭವ)

ಸೂರ್ಯ, ಚಂದ್ರ ನಕ್ಷತ್ರ,ಭೂಮಿಗಳಿಗೆ ಒಂದಕ್ಕೊಂದಕ್ಕೂ ಬಿಡಿಸಲಾರದ ಸಂಬಂಧವಿದೆ. ಸೂರ್ಯ, ಚಂದ್ರ, ನಕ್ಷತ್ರರು ಒಂದಾದಾಗ ಮಾತ್ರ ಭೂಮಿ ತಾಯಿಯ ಹೃದಯವು ತುಂಬಿ ಬರುತ್ತದೆ. ಸೂರ್ಯ, ಚಂದ್ರ, ನಕ್ಷತ್ರ, ಭೂಮಿ ಹೇಗೆ ಒಂದಾಗಿರುತ್ತದೆಯೋ ಹಾಗೆಯೇ ಎಲ್ಲಾ ಖಂಡಗಳ ಜನರೂ ಸಹ ಭೇದ-ಭಾವವಿಲ್ಲದೆ ಒಂದಾಗಿ ಬಾಳಬೇಕೆಂಬುದು ಬೇಂದ್ರೆಯವರ ಅಭಿಲಾಷೆಯಾಗಿದೆ. ನಕ್ಷತ್ರ, ಗ್ರಹ, ಉಪಗ್ರಹ ಹೀಗೆ ವಿಭಿನ್ನ ದಾರಿಗಳೇ ಒಂದಾಗಿರುವಾಗ ಎಲ್ಲಾ ಖಂಡಗಳ ಮನುಷ್ಯ ಸಂಬಂಧಗಳು ಒಂದಾಗಲು ಸಾಧ್ಯವಿಲ್ಲವೇ? ಹಾಗೆ ಒಂದಾದಾಗ ಮಾತ್ರ ಮಾನವ ಸಂಬಂಧಗಳಲ್ಲಿ ಒಲವು ಮೂಡಲು ಸಾಧ್ಯ ಎನ್ನುವುದು ಬೇಂದ್ರೆಯವರ ತತ್ವವಾಗಿದೆ.

*"ಮೋಡ ಮುಗಿಲಲಿ ಮೋಡಿ ಮಾಡಿತ್ತು. ಸಂಧ್ಯಾ ಪುಷ್ಪ*

*ದೇವದೇವನಿಗೆ ರವಿಯೆ ಅಲಾಬಿ*

*ರವಿಗೊ ಚಂದ್ರನೆ ಗುಲಾಬಿ*

*ಹಗಲಿಗಾಯ್ತು ಕಾರುಣ್ಯ ವರ್ಷ*

*ನಿಶೆಗೆ! ರೋಮ ರೋಮಕ್ಕೆ ನಕ್ಷತ್ರ ಹರ್ಷ*

*ಒಂದರಲಿ ಮೂರಾಯ್ತು ಆ ಮೂರು ಒಂದಾಯ್ತು*

*ಭೂ ಮಾತೃ ಹೃದಯಕ್ಕೆ! ಅದರ ವಾತ್ಸಲ್ಯ ಸಂದಾಯ್ತ ಮೂಡಿತ್ತು. "ದೇವರ ಗುಲಾಬಿ!'"*

[ಮೂಡಿತ್ತು ದೇವರ ಗುಲಾಬಿ]

ಶ್ರಾವಣ ಮಾಸವು ಬರುವುದಕ್ಕಿಂತ ಮೊದಲು ಭೂಮಿತಾಯಿ ಕಾಂತಿಹೀನಳಾಗಿರುತ್ತಾಳೆ.ಶ್ರಾವಣ ಮಾಸದ ಸಿರಿ ಬರುವ ಸೂಚನೆ ದೊರತ ಕೂಡಲೇ

ಭೂಮಿತಾಯಿ ತನ್ನ ಸೋಮಾರಿತನವನ್ನು ಬಿಟ್ಟು ತನ್ನನ್ನು ತಾನು ಸಿಂಗರಿಸಿಕೊಳ್ಳುವ ತವಕದಲ್ಲಿದ್ದಾಳೆ.

*ಮಲೆಯ ಮೊಗವೇ ಹೊರಳಿದೆ*

*ಕೋಕಿಲಕೆ ಸವಿ ಕೊರಳಿದೆ*

*ಬೇಲಿಗೂ ಹೂ ಬೆರಳಿದೆ*

*ನೆಲಕೆ ಹರೆಯವು ಮರಳಿದೆ*

*ಭೂಮಿತಾಯಿ ಒಡಮುರಿದು ಎದ್ದಳೋ*

*ಶ್ರಾವಣದ ಸಿರಿ ಬರಲಿದೆ"*

[ಬಾರೋ ಸಾಧನಕೇರಿಗೆ]

ಇತಿಹಾಸದ ಪುಟಗಳನ್ನು ತೆಗೆದು ನೋಡಿದರೂ ನಮಗೆ ಕಾಣುವುದು ಯುದ್ಧ ಮತ್ತು ರಕ್ತ. ಹೆಣ್ಣು, ಹೊನ್ನು ಮತ್ತು ಮಣ್ಣಿಗಾಗಿ ಇತಿಹಾಸದ ರಾಜರು ಭೂಮಿಯಲ್ಲಿ ರಕ್ತವನ್ನು ಹರಿಸಿದರು. ರಾಜತ್ವ ಎಂಬ ಅಧಿಕಾರವನ್ನು ಪಡೆಯಲು ಚರಿತ್ರೆಯ ರಾಜರು ರಕ್ತದ ಹೊಳೆಯನ್ನೇ ಹರಿಸಿದರು. ಒಟ್ಟಾರೆ ಚರಿತ್ರೆಯಲ್ಲಿ ಅಧಿಕಾರವನ್ನು ಶಾಂತಿ ರೀತಿಯಲ್ಲಿ ಪಡೆದ ಉದಾಹರಣೆಗಳೇ ಕಡಿಮೆ.ಇಲ್ಲವೆಂದರೂ ಅತಿಶಯೋಕ್ತಿಯಲ್ಲ. ಇಂತಹ ರಕ್ತಪಾತದ ರಾಜಕೀಯದ ಬಗ್ಗೆ ಬೇಂದ್ರೆ ಪ್ರತಿಭಟನೆಯನ್ನು ವ್ಯಕ್ತಪಡಿಸುತ್ತಾರೆ. ಈ ರಾಜರು ಪುಂಡರಾಗಿ ಭೂಮಿತಾಯಿಯನ್ನು ಅಧಿಕಾರಕ್ಕಾಗಿ ಬೆನ್ನಟ್ಟಿ ಹಿಂಸಿಸುತ್ತಿದ್ದಾರೆ. ಈ ರಾಜರನ್ನು ಬೇಂದ್ರೆ ಯವರು 'ತಾಯ್ಗಂಡರು' ಎಂದು ಕರೆದು ತಮ್ಮ ಪ್ರತಿಭಟನೆಯನ್ನು ವ್ಯಕ್ತಪಡಿಸಿದ್ದಾರೆ. ಅನ್ನ ಕೊಟ್ಟ ಭೂಮಿತಾಯಿಯನ್ನೇ ತಮ್ಮ ಅಧಿಕಾರದ ಲಾಲಸೆಯಿಂದಾಗಿ ರಾಜರು ಅವಳನ್ನೇ ಆಳುವ ಗಂಡರಾಗಿ ಹೋಗಿದ್ದಾರೆ! ಇಂತಹ ಪುಂಡರನ್ನು ಭೂಮಿತಾಯಿ ಕೊಂದು ರಕ್ತದ ರುಚಿಯನ್ನು ಸಹ ನೋಡಿದ್ದಾಳೆ. ಭೂಮಿತಾಯಿ ಮೊದಲಗಿತ್ತಿಯಂತೆ ಮರೆಯುತ್ತಾ ಜೊತೆಗೆ ತನ್ನ ಹಿಂಸೆಗೆ ಕಾರಣರಾದವರನ್ನು ಶಿಕ್ಷಿಸುತ್ತಾ ಮೆರೆಯುತ್ತಿದ್ದಾಳೆ. ಇದು ಭೂಮಿತಾಯಿ ತಣ್ಣನೆಯ ಕ್ರೌರ್ಯದ ಮುಖ.

*'ಮೊದಲಗಿತ್ತಿಯಂತೆ ಮೆರೆಯುವಿಯೇ ತಾಯಿ*

*ಮೊದಲಗಿತ್ತಿಯಂತೆ ಮೆರೆಯುತಿಹೆ*

*ಹಿಂಡಾಗಿ ಪಂಡರು ಅಂಡಲೆಯಲು ನಿನ್ನ*

*ನೆತ್ತರು ಒರೆಹಚ್ಚಿ ನೋಡಿರುವೆ*

*ಪಾತಾಳ ಕಂಡರು ಕೆಲ ತಾಯ್ಗಂಡರು*

*ಅವರನ್ನೂ ಮಡಿಲಾಗ ಮಡಗಿಸಹೆ*

*ಹದಿನಾರು ರಾಜರು ತಲೆ ಕೆಳಗಾದರು*

*ಆದರೂ ತಲೆಯೆತ್ತಿ ನಿಂತಿರುವೆ*

*ನಿನ್ನ ತೇಜದ ಮುಂದೆ ರಾಜತೇಜವು ಕೂಸು*

*ಮೊದಲಗಿತ್ತಿಯಂತೆ ನೀನು ಮೆರೆಯುತಿಹೆ'*[12]

[ಮೊದಲಗಿತ್ತಿ]

ಹಿಂಸೆ, ಯುದ್ಧ, ರಕ್ತಪಾತದಲ್ಲಿಯೇ ಇದ್ದರೆ ಮನುಷ್ಯ ಪ್ರಪಂಚದಲ್ಲಿ ಶಾಂತಿ ನೆಲೆಸುವುದು ಅಸಾಧ್ಯ. ಆದ್ದರಿಂದ ಕವಿ ಬೇಂದ್ರೆ ಮೊದಲಗಿತ್ತಿಯಂತೆ ಮೆರೆಯುತ್ತಿರುವ ಭೂಮಿಯು ತಾಯಿ ಆಗಲಿ ಎಂದು ಆಶಿಸುತ್ತಿದ್ದಾರೆ. ಒಳ್ಳೆಯ ಮಕ್ಕಳನ್ನು ಹಡೆಯುವಂತೆ ಇನ್ನು ಮುಂದೆ ಈ ರಕ್ತಪಾತದ ಹೊಳೆ ಹರಿಸದಂತಹ ಸುಪುತ್ರರನ್ನು ಹಡೆಯುವಂತೆ ಬೇಂದ್ರೆ ಭೂಮಿತಾಯಿಗೆ ಹೇಳುತ್ತಿದ್ದಾರೆ. 'ಎಂದು ಮಂಗಲ ನಿನ್ನ ದೇವ ಗರ್ಭಕೆ?' ಎಂದು ಬೇಂದ್ರೆ ಮಾನವ ಜನಾಂಗದಲ್ಲಿ ಎಲ್ಲಾ ರೀತಿಯ ಆತ್ಮೀಯ ಬಾಂಧವ್ಯ ಎಂದು ಸಾಧ್ಯವಾಗುತ್ತದೆಯೆಂದು ಭೂಮಿಯನ್ನು ಕೇಳಿಕೊಂಡಿದ್ದಾರೆ.

*ಹಾಲಿನ ಹೃದಯಕ್ಕೆ ಕುಬುಸವನು ತೊಡಿಸಿ*
*ಹೂ ಮುಡಿಸಿಕೊಂಡೆಂದು ನೀನಲಿವೆ*
*ಬಸಿರು ತುಂಬಲು ಹಸಿರುಡಿಗೆಯನುಟ್ಟೆಂದು*
*ವನವಾಸ ನವಮಾಸ ತೀರಿಸುವೆ*
*ಮುನ್ನಿಲ್ಲ ಇನ್ನಾರೆ ಮಕ್ಕಳ ದಿನವೆಂದು*
*ಮೂಡೀತು ಹೇಳವ್ವ ಬಿನ್ನವಿಸುವೆ*
*ಎಂದು ಮಂಗಲ ನಿನ್ನ ದೇವಗರ್ಭಕೆ? – ಇನ್ನೂ*
*ಮೊದಲಗಿತ್ತಿಯಂತೆ ಮೆರೆಯುತಿಹೆ!'*[13]

[ಮೊದಲಗಿತ್ತಿ]

ಯುದ್ಧ, ಹಿಂಸೆಗಳೆಲ್ಲಾ ಮನುಷ್ಯನ ಕ್ರೂರ ಮುಖದ ಪ್ರತಿಫಲಗಳು. ಮನುಷ್ಯ ತನ್ನ ಇದೇ ಕ್ರೂರತೆಯನ್ನು ಮುಂದುವರಿಸಿದರೆ ಭೂಮಿಯ ಮೇಲೆ ನಂದನವನ ಸಾಧ್ಯವಾಗುವುದಿಲ್ಲ. ನಿಜವಾದ ಅರ್ಥದಲ್ಲಿ ಭೂಮಿ ಮತ್ತು ಮನುಷ್ಯ ಸಂಬಂಧವು ತಾಯಿ – ಮಕ್ಕಳ ಸಂಬಂಧವಾದಾಗ ಮಾತ್ರ ಭೂಮಿಯ ಮೇಲಿನ ಕ್ರೌರ್ಯವು ನಿಲ್ಲಲು ಸಾಧ್ಯವಾಗುತ್ತದೆ ಎಂಬ ಭಾವವೂ ಇಲ್ಲಿ ವ್ಯಕ್ತವಾಗಿದೆ.

ಬೇಂದ್ರೆಯವರಿಗೆ ಭೂಮಿತಾಯಿ ಯಾವಾಗಲೂ ಚೆಲುವಿಯಾಗಿಯೇ ಕಾಣಿಸುತ್ತಾಳೆ. ವಾತ್ಸಲ್ಯದ ಮೂರ್ತಿಯಾಗಿಯೇ ಮೆರೆಯುತ್ತಾಳೆ. ಭೂಮಿತಾಯಿಯ ಇನ್ನೊಂದು ಮುಖವಾದ ಕ್ರೌರ್ಯದ ದರ್ಶನವಾಗುವುದು ಆಕೆಯನ್ನು ಮನುಷ್ಯರು ಹಿಂಸಿಸುವಾಗ, ಅಧಿಕಾರದ ಲಾಲಸೆಗಾಗಿ ಅವಳನ್ನು ನಿರ್ದಯವಾಗಿ ಆಳುವಾಗ ಮಾತ್ರ. ಭೂಮಿತಾಯಿಯನ್ನು ಮೊದಲಗಿತ್ತಿಯಂತೆ ಮೆರೆಸಿದ ಬೇಂದ್ರೆಯವರು ಆಕೆಯನ್ನು 'ಚಿಗರಿಗಂಗಳ ಚೆಲುವಿ' ಎಂದೇ ಕರೆದಿದ್ದಾರೆ. 'ಚಿಗರಿ' ಎನ್ನುವ ಮೂಲಕವೇ ಭೂಮಿ ತಾಯಿ ಜಿಂಕೆಯಂತಹ ಸಾಧುಗುಣವನ್ನು ಹೊಂದಿರುವಂತಹಳು ಎಂಬುದನ್ನು ಹೇಳುತ್ತಿದ್ದಾರೆ. ಭೂಮಿ ತಾಯಿ ಎಂದರೆ ಸಮೃದ್ಧಿಯ ಸಂಕೇತ ಎಂದು ನಾವು ತಿಳಿದಿದ್ದೇವೆ. ಆದರೆ ಇಂತಹ ಸಮೃದ್ಧಿಯನ್ನು ಹೊಂದಿರುವ ಈಕೆಗೆ ನೆಮ್ಮದಿಯೇ ಇಲ್ಲವಾಗಿದೆ. ಕ್ಷಣಕ್ಷಣವೂ ತನ್ನ ಮೇಲೆ ನಡೆಯುತ್ತಿರುವ ಶೋಷಣೆಯಿಂದಾಗಿ ಆಕೆ ಭಯದಿಂದ ತತ್ತರಿಸಿ ಹೋಗಿದ್ದಾಳೆ. ಈ ಕ್ರೌರ್ಯವನ್ನು ಕಂಡು "ಚಿಗರಿಗಂಗಳ ಚೆಲುವಿ ಬೆದಽರಿ ನಿಂತಾಳ ನೋಡೋ ಬೆದಽರಿ ನಿಂತಾಳ' ಎಂದು ಕವಿ ಬೇಂದ್ರೆ ಭೂಮಿಯ ತಾಯಿ ಮನೋಸ್ಥಿತಿಯನ್ನು ಒಂದೇ ಸಾಲಿನಲ್ಲಿ ಕಟ್ಟಿಕೊಟ್ಟಿದ್ದಾರೆ. ಸಂಪತ್ತು ಇದ್ದವರನ್ನೇ ತಾನೇ ಇಲ್ಲದವರು ದೋಚುವುದು ಭೂಮಿತಾಯಿಯ ಸಮೃದ್ಧತೆ ನೋಡುಗರ ಕಣ್ಣು ಕುಕ್ಕಿದೆ. ಪರಿಣಾಮವಾಗಿ ಭೂಮಿತಾಯಿಯ ಮೇಲೆ ಕ್ರೂರವಾಗಿ ಹಿಂಸೆ ನಡೆದಿದೆ ಹಾಡುಹಗಲೇ ನಡೆದಂತಹ ದರೋಡೆ ಇದು.

*'ಬ್ಯಾಟಿ ನಾಯಿದರ್ಯಾವೋ*

*ಹಸುಜೀವ ನೆದರ್ಯಾವೋ*

*ಗಳಗಳನೆ ಗಿಡದೆಲಿ ಉದರ್ಯಾವೋ*

*ಗೆಣೆಯಾ ಉದರ್ಯಾವೋ*

*ದಿನ್ನಿ ಮಡ್ಡಿ ಗುಡ್ಡ ಅದರ್ಯಾವ;*

*ಅದನ ತಾ ಕಂಡು ನೊಂದ್ಯಾಳೋ,*

*ಬೆಂದಾಽಳೊ ಅಂದಾಽಳೊ*

*'ಇದು ಎಂಥಾ ಜೀವದ ಬ್ಯಾಟಿ ಹಾಡೇ ಹಗಲಽ"*

[ಚಿಗರಿಗಂಗಳ ಚೆಲುವಿ]

ಭೂಮಿತಾಯಿಯ ಸಮೃದ್ಧತೆ ಮಾನವನ ದುರಾಸೆ ಕಂಗಳಿಗೆ ಇನ್ನಷ್ಟು ಇಂಬು ಕೊಟ್ಟಿದೆ. ಹಾಡ ಹಗಲೇ ಜೀವಗಳನ್ನು ಬಲಿ ತೆಗೆದುಕೊಳ್ಳುತ್ತಿದ್ದಾರೆ. ಆಳುವರು, ಗೆದ್ದವರದ್ದೇ ಒಂದು ಸಾಮ್ರಾಜ್ಯವಾಗಿದೆ. ಅವರು ತಮ್ಮ ಕೈ ಕೆಳಗಿನವರನ್ನು ಅರೆಸತ್ತ ಜೀವವನ್ನಾಗಿಸಿದ್ದಾರೆ. ಇಷ್ಟೆಲ್ಲವನ್ನು ನೋಡುತ್ತಿರುವ ಭೂಮಿತಾಯಿ ತನ್ನ ದುಃಖವನ್ನು ನುಂಗುತ್ತಾ ಚಂದ್ರನನ್ನು ಎತ್ತಿಕೊಂಡು, ತನ್ನ ಪಥದಲ್ಲಿ ಸಾಗುತ್ತಾ ಸೂರ್ಯನನ್ನು ಸುತ್ತುತ್ತಿದ್ದಾಳೆ. ಈ ರೀತಿ ಇಲ್ಲಿ ಬೇಂದ್ರೆ ಮನುಷ್ಯನ ಕ್ರೂರ ಮುಖದ ಜೊತೆಗೆ ಭೂಮಿಯ ಚಲನೆಯ ವೈಜ್ಞಾನಿಕ ಸತ್ಯವನ್ನು ಸಹ ಚಿತ್ರಿಸಿದ್ದಾರೆ.

*'ತನ್ನ ತಾ ಸುತ್ತ್ಯಾಳೊ*

*ಹೊತ್ತಿನ ಬೆನ್ಹತ್ತ್ಯಾಳೊ*

*ತಿಂಗಳನ ಬಗಲಗೆತ್ತ್ಯಾಳೊ*

*ಗೆಣೆಯಾ ಎತ್ತ್ಯಾಳೊ*

*ಉಕ್ಕಕ್ಕುವ ದುಃಖ ಒಳಗೊತ್ತ್ಯಾಳೊ'*[15]

[ಚಿಗರಿಗಂಗಳ ಚೆಲುವಿ]

ತನಗೆ ಇಷ್ಟೆಲ್ಲಾ ಶೋಷಣೆಯನ್ನು ಮಾಡುತ್ತಿರುವ ಮನುಷ್ಯನ ಕ್ರೌರ್ಯವನ್ನು ಕಂಡು ಭೂಮಿತಾಯಿ ಮನನೊಂದು ಮಾನವ ಜನಾಂಗವನ್ನು ಈ ರೀತಿ ಪ್ರಶ್ನಿಸುತ್ತಾಳೆ.

*'ಇಂತ ನೆಲವೆಂದು ಕಡಿಲ್ಯಾಕೊ*

*ಬಡಿಲ್ಯಾಕೊ*

*ಒಡಿಲ್ಯಾಕೊ*

*ಒಡವ್ಯಲ್ಲೋ ಮಗನೆ ಉಸಿರಿದ್ದೊಡಲಂತಾಃಳೋ'*[16]

[ಚಿಗರಿಗಂಗಳ ಚೆಲುವಿ]

ಮನುಷ್ಯ ಭೂಮಿಯನ್ನು ತನ್ನ ಆಸ್ತಿಯೆಂದು ಪರಿಗಣಿಸಿದ್ದಾನೆ. ಇದನ್ನು ಮನಗಂಡ ಭೂಮಿತಾಯಿ ನಾನು ಒಡವೆಯಲ್ಲ, ಉಸಿರಿರುವ ಒಡಲು ಎಂದು ಹೇಳುತ್ತಾಳೆ. ಆದರೆ ಈ ಕೂಗು ಕ್ರೂರಿಯಾದ ಮನುಷ್ಯನಿಗೆ ಕೇಳುವುದೇ? ಮನುಷ್ಯ ತಾನು ಹುಟ್ಟಿದ ಈ ಭೂಮಿಯನ್ನೇ ಹಿಂಸಿಸುತ್ತಿದ್ದಾನೆ. ಮಾನವನ ಈ ಹಿಂಸಾ ಪ್ರವೃತ್ತಿಯ ಬಗ್ಗೆ ಏನೂ ಮಾಡಲಾಗದ ಸ್ಥಿತಿಯಲ್ಲಿ ಭೂಮಿತಾಯಿ ಇದ್ದಾಳೆ.

ಬೇಂದ್ರೆಯವರು ಭೂಮಿಯನ್ನು ತಾಯಿಯಾಗಿ ಸಮೃದ್ಧತೆಯ ಸಂಕೇತವಾಗಿ, ಸೌಂದರ್ಯದ ಖನಿಯಾಗಿ ನೋಡಿದರೆ ಅವರ ಸಮಕಾಲೀನರಾದ ಇನ್ನೊಬ್ಬ ಶ್ರೇಷ್ಠ ಕವಿ ಕುವೆಂಪುರವರು ಭೂಮಿಯನ್ನು ಬೇಂದ್ರೆಗಿಂತ ವಿಭಿನ್ನವಾದ ದೃಷ್ಟಿಕೋನದಿಂದ ನೋಡುತ್ತಾರೆ. ಕುವೆಂಪುರವರು ಭೂಮಿಯ ಮೇಲೆ ಆರೋಪಿತವಾದ ಎಲ್ಲಾ ದೈವತ್ವವನ್ನು ಅಲ್ಲಗೆಳೆಯುತ್ತಾರೆ. ಭೂಮಿಯ ಕ್ರೌರ್ಯವನ್ನೇ ಪ್ರಧಾನವಾಗಿ ಎತ್ತಿ ತೋರಿಸುತ್ತಾರೆ. ಬೇಂದ್ರೆಯವರ ಕವನಗಳಲ್ಲಿ ಭೂಮಿಯು ತಾಯಿಯಾಗಿ, ವಾತ್ಸಲ್ಯಮೂರ್ತಿಯಾಗಿ ಮೆರೆಯುತ್ತಾಳೆ. ಆದರೆ ಕುವೆಂಪುರವರಲ್ಲಿ ಭೂಮಿ 'ಕುಂತಿ'ಯ ಪಾತ್ರ ವಹಿಸಿದ್ದಾಳೆ. ಭಾರತದ ಕುಂತಿ ಬಯಸಿ ಬಯಸಿ ಕರ್ಣನನ್ನು ಹೆತ್ತನಂತರ ಮಗುವನ್ನು ಗಂಗೆಯ ಪಾಲು ಮಾಡಿದ ನಿರ್ದಯಿ ತಾಯಿ. ಇಂತಹ ಕುಂತಿಯ ಪ್ರತಿಮೆಯನ್ನು ಕುವೆಂಪು ಭೂಮಿಗೆ ಆರೋಪಿಸಿದ್ದಾರೆ.

*ಕರ್ಣನಿಗೆ ಆ ಕುಂತಿ*

*ತಾಯಂತೆ ಅಂತೆ*

*ಓ ಭೂಮಿ ನೀನೆಮಗೆ*

*ತಾಯಲ್ತೆ ಅಂತೆ*[17]

[ಜಡವಾದಿ]

ಕುಂತಿಯಂತೆ ಈ ಭೂಮಿ ಕೂಡ ಜವಬ್ದಾರಿಯಿಂದ ಜಾರಿಕೊಂಡು ನಿರ್ದಯಿಯಂತೆ ವರ್ತಿಸುತ್ತದೆ.ಭೂಮಿಯ ಬಗೆಗಿನ ಎಲ್ಲಾ ಪ್ರೀತಿಯ, ಕೋಮಲ ಭಾವನೆಗಳನ್ನು ಕುವೆಂಪು ನಿರಾಕರಿಸುತ್ತಾರೆ. ಭೂಮಿ ಮನುಜರಿಗೆ ಕೈಯ ಎತ್ತಿ ಕೊಟ್ಟಿದ್ದು ಏನೂ ಇಲ್ಲ. ಬದಲಿಗೆ ಆಕೆ ಎಲ್ಲವನ್ನೂ ಕೊಂದು ತಿನ್ನುವಂತಹ ರಾಕ್ಷಸಿ ಎನ್ನುವುದು ಕುವೆಂಪುರವರ ಅಭಿಪ್ರಾಯವಾಗಿದೆ. ಕುವೆಂಪುರವರು ಭೂಮಿಯನ್ನು 'ಓ ಭೂಮಿ ರಾಕ್ಷಸಿಯೆ' ಎಂದು ಸಂಭೋಧಿಸಿದ್ದಾರೆ. ಭೂಮಿಯ ಮೇಲೆ ಎಷ್ಟೇ ಅನರ್ಥಗಳು ಸಂಭವಿಸುತ್ತಿದ್ದರೂ ಭೂಮಿ ಎಂಬ ರಾಕ್ಷಸಿ ತನ್ನ ಪಾಡಿಗೆ ತಾನು ತನ್ನ ಪಥದಲ್ಲಿ ಉರುಳುತ್ತಾ ಸಾಗುತ್ತಾಳೆ. ಆಕೆಗೆ ತನ್ನ ಮೇಲಿರುವ ಜೀವರಾಶಿಗಳ ಬಗ್ಗೇ ಯಾವುದೇ ರೀತಿಯ ಕಳವಳ ಆಕೆಗೆ ಇದ್ದಂತೆ ಇಲ್ಲ.

*ಭರತಖಂಡವು ಬೂದಿಯಾದರೇನುರುಳು*

*ತುಂಗೆ ಹರಿಯಲಿ ಉರುಳು*

*ಗಂಗೆ ನಿಲ್ಲಲಿ, ಉರುಳು*

*ಉರುಳುರುಳು ಹಗಲಿರಳು*

*ಸುಂದರ ವಸುಂಧರಾ'* [18]

[ಜಡವಾದಿ]

ಒಂದೇ ಕಾಲದಲ್ಲಿದ್ದ ಕವಿಗಳ ಮನೋಧರ್ಮವು ಅವರವರ ವಿದ್ಯೆ, ಪರಿಸರ, ಸಂಸ್ಕೃತಿ, ಪ್ರತಿಭೆಗಳ ಮೂಲಕ ಭಿನ್ನವಾಗುತ್ತದೆ. ಕುವೆಂಪು ಮೊದಲ ನಿಸರ್ಗಾನುಭವಿ ಕವಿ. ನಿಸರ್ಗದಲ್ಲೇ ಅನುಭಾವವನ್ನು ಕಂಡುಕೊಂಡ ಕವಿ. ಪ್ರಕೃತಿಯನ್ನು ಸೌಂದರ್ಯದ ಪ್ರತೀಕವಾಗಿ ನೋಡುವುದು. ಜೊತೆಗೆ ಅದೇ ಪ್ರಕೃತಿಯನ್ನು ಅನುಭಾವದ ನೆಲೆಗೆ ಕೊಂಡೊಯ್ಯುವುದು ಕುವೆಂಪುರವರ ವೈಶಿಷ್ಟ್ಯಗಳಲ್ಲಿ ಒಂದಾಗಿದೆ. ಕುವೆಂಪು ಸಾಹಿತ್ಯದಲ್ಲಿ ವೈಚಾರಿಕತೆಯು ಕೂಡ ಮನೆ ಮಾಡಿದೆ. ಹಿಂದಿನವರು ಹೇಳಿದ ಸಿದ್ಧಾಂತವನ್ನೋ ಹೇಳಿಕೆಯನ್ನೋ ಸುಲಭವಾಗಿ ಒಪ್ಪುವ ಜಾಯಮಾನ ಕುವೆಂಪುರವರದ್ದಲ್ಲ. ಆದ್ದರಿಂದಲೇ ಕುವೆಂಪು ಭೂಮಿಯನ್ನು ವಾತ್ಸಲ್ಯ ಮೂರ್ತಿ, ತಾಯಿ ಎನ್ನುವ ಎಲ್ಲಾ ಕಲ್ಪನೆಗಳಿಂದ ಬಿಡಿಸಿ ಭೂಮಿಯ ಹಿಂಸಾಸ್ವರೂಪವಾದ ಬದುಕನ್ನು ಕಟ್ಟಿಕೊಟ್ಟಿದ್ದಾರೆ. ಇಲ್ಲಿ ಕುವೆಂಪು ವೈಚಾರಿಕತೆಯೂ ಕೂಡ ಕೆಲಸಮಾಡಿದೆ. ಆದರೆ ಬೇಂದ್ರೆಯವರ ಹಿನ್ನೆಲೆ, ಪರಿಸರ, ಬಾಲ್ಯ, ಪ್ರತಿಭೆಗಳು ಕುವೆಂಪುರವರಿಗಿಂತ ಭಿನ್ನವಾಗಿವೆ. ಭೂಮಿಯಲ್ಲಿ ಬೇಂದ್ರೆಯವರು ವಾತ್ಸಲ್ಯವನ್ನು, ಸೌಂದರ್ಯವನ್ನು, ಸಮೃದ್ಧತೆಯನ್ನು, ಮಾತೃತ್ವವನ್ನು ಕಂಡುಕೊಳ್ಳುತ್ತಾರೆ. ಆದರೆ ಮನುಷ್ಯ ತನ್ನ ಸ್ವಾರ್ಥದಿಂದ ಭೂಮಿಯನ್ನು ಬರಿದು ಮಾಡುವ ಕ್ರಿಯೆಯ ವಿರುದ್ಧ ಬೇಂದ್ರೆ ಸಿಡಿಯುತ್ತಾರೆ.

ಮಲ್ಲಿಗೆಯ ಕವಿ ಎಂದೇ ಪ್ರಸಿದ್ಧಿಗೆ ಬಂದ ಕೆ.ಎಸ್. ನರಸಿಂಹಸ್ವಾಮಿಯವರು ಕೂಡ ಭೂಮಿಯನ್ನು 'ತಾಯಿ'ಯಂತೆಯೇ ನೋಡಿದ್ದಾರೆ. ಮನುಷ್ಯ ಭೂಮಿಯಲ್ಲಿ ಹುಟ್ಟಿದವನಾಗಿರುವುದರಿಂದ ಅವನ ವಿಕಾಸ ಬೆಳವಣಿಗೆ ಎಲ್ಲವೂ ಕೂಡ ಭೂಮಿಯಲ್ಲಿಯೇ ಆಗಬೇಕು ಎಂಬುದು ಕೆ.ಎಸ್.ನ ರವರ ಅಭಿಮತ. ಮನುಷ್ಯನ ವಿಕಾಸದ ಹಂತದಲ್ಲಿ ಹೆತ್ತತಾಯಿಯ ಪಾತ್ರದಷ್ಟೇ ಭೂಮಿತಾಯಿಯ ಪಾತ್ರವು ಗಮನಾರ್ಹವೆಂದು ಕೆ.ಎಸ್. ನರಸಿಂಹಸ್ವಾಮಿಯವರು ಅಭಿಪ್ರಾಯಪಡುತ್ತಾರೆ. ಮನುಷ್ಯನ ವಿಕಾಸದ ಹಂತದಲ್ಲಿ ಆತನನ್ನು ಅನೇಕ ಕಠಿಣ ರೀತಿಯಲ್ಲಿ ತಯಾರು ಮಾಡುವ ಹೊಣೆಯನ್ನು ಭೂಮಿ ತಾಯಿಯು ಹೊತ್ತಿದ್ದಾಳೆ.

*'ಮಂಜು ಮುಚ್ಚುವ ಕೆಲಸ, ಬಿಸಿಲು ಬಿಚ್ಚುವ ಕೆಲಸ*

*'ಏನು ಎಲ್ಲಿಗೆ ಬಂತು?" ಬೆದಕು ನೋಟ*

*ಬೆಂಕಿಯಲಿ ನೀರಿನಲಿ ತನ್ನ ಮಕ್ಕಳನೆಸದು*

*ಈಜುಕಲಿಸುವ ನೆಲದ ತಾಯಿ – ನೋಟ'* [19]

[ಬೆಳಗಿನ ಮಂಜು]

ಕುವೆಂಪು ತಮ್ಮ ಕವನವೊಂದರಲ್ಲಿ ಭೂಮಿತಾಯಿ ಎಲ್ಲವನ್ನು ನುಂಗುವ ರಾಕ್ಷಸಿ ಎಂದು ಕರೆದಿದ್ದಾರೆ. ಕುರಿಯನ್ನು ಚೆನ್ನಾಗಿ ಸಾಕಿ ಮುಂದೆ ಅದನ್ನು ಕೊಲ್ಲುವ ಕುರುಬಗಿತ್ತಿಯಂತೆ ಎಂದು ಭೂಮಿ ತಾಯಿಯನ್ನು ಅವರು ಟೀಕಿಸಿದ್ದಾರೆ. ಆದರೆ ಕೆ.ಎಸ್. ನರಸಿಂಹಸ್ವಾಮಿಯವರು ಭೂಮಿ ತಾಯಿ ಕೊಲ್ಲುವುದಕ್ಕೆ ಕಾರಣವನ್ನು ಹೇಳುತ್ತಿದ್ದಾರೆ. ಭೂಮಿತಾಯಿಯ ಹಿಂಸೆಗೆ ಕಾರಣವನ್ನು ಸಹ ಇವರು ಹೇಳುತ್ತಾರೆ. ಭೂಮಿ ತಾಯಿಯು ಮನುಷ್ಯರು ಮಿತಿಮೀರಿ ನಡೆದರೆ ಮಾತ್ರ ಕೊಲ್ಲಲು ಬರುತ್ತಾಳೆ. ಆಕೆ ಚಂದ್ರನಂತೆ ಶಾಂತಸ್ವಭಾವದವಳು ಹೌದು ಹಾಗೆಯೇ ಮಿತಿ ಮೀರಿದರೆ ಜ್ವಾಲಾಮುಖಿಯಾಗಿ ರೌದ್ರಿಯಾಗಿ ಬಲಿ ತೆಗೆದುಕೊಳ್ಳುವವಳು ಕೂಡ ಹೌದು. ಭೂಮಿತಾಯಿ ಕುವೆಂಪು ಹೇಳುವ ರೀತಿಯಲ್ಲಿ ರಾಕ್ಷಸಿ ಅಲ್ಲ ಕೆ.ಎಸ್. ನರಸಿಂಹಸ್ವಾಮಿಯವರ ಪ್ರಕಾರ ಭೂಮಿತಾಯಿಯ ರಾಕ್ಷಸಿ ಗುಣ ಶಾಶ್ವತ ಅಲ್ಲ. ಅದು ಕೇವಲ ಮನುಷ್ಯನು ಮಿತಿ ಮೀರಿ ನಡೆದಾಗ ಮಾತ್ರ.

*ಪ್ರಳಯೋತ್ತರ ಸುಖ ಸ್ವಪ್ನ ನೀಲ ತರುಚ್ಛಾಯೆಯಲ್ಲಿ*

*ಹೆಣ ಭಾರಕೆ ಹೆಡೆಯ ತೆತ್ತು*

*ಮಾತಾಡದೆ ಎಲ್ಲ ಹೊತ್ತು*

*ಇಲ್ಲಿ ನಡೆವುದೊಂದಕ್ಕೂ ನನಗೂ ಸಂಬಂಧವಿಲ್ಲ*

*ಈ ಬಾಳಿನ ಚೆಲುವಿನಿಂದ ನನಗೇನಾನಂದವಿಲ್ಲ;*

*ಗುಡಿಗೋಪುರ ರಾಜ್ಯ ಕಾವ್ಯ ಶಾಸ್ತ್ರಜ್ಞರು ಬರಲಿ ಮುಂದೆ*

*ಮೇರೆ ಮೀರಿ ಮುಂಬರಿದರೆ ಅಪ್ಪಳಿಸುವೆನುವಳೀಕೆ*[20]

[ಭೂಮಿಗೀತ]

ಒಟ್ಟಾರೆ ಕೆ.ಎಸ್. ನರಸಿಂಹಸ್ವಾಮಿಯವರ ಭೂಮಿ ತಾಯಿಯ ಹಾಗೆ ಪೊರೆಯುವವಳೂ, ರಕ್ಷಿಸು ವವಳೂ. ಹಾಗೆ ಮನುಷ್ಯನ ಬೆಳವಣಿಗೆಗೆ ಅನೇಕ ರೀತಿಯ ಕಠಿಣ ಪರೀಕ್ಷೆಗಳನ್ನು ಒಡ್ಡಿ ತಯಾರು ಮಾಡುವವಳು ಕೂಡ ಆಗಿದ್ದಾಳೆ. ಭೂಮಿಯ ಎಲ್ಲ ಹಿರಿಮೆಯನ್ನು, ಪ್ರೀತಿಯನ್ನು ಎಲ್ಲೂ ಕವಿ ಗೇಲಿ ಮಾಡುವುದೇ ಇಲ್ಲ. ಹಾಗೆ ಕುವೆಂಪು ರೀತಿ ಭೂಮಿರಾಕ್ಷಸಿ ಎಂಬ ಹೇಳಿಕೆಗಂತೂ ಕೆ.ಎಸ್. ನರಸಿಂಹಸ್ವಾಮಿ ಬರುವುದಿಲ್ಲ. ಬದಲಿಗೆ ಭೂಮಿಯ ಹಿಂಸಾರೂಪ ದರ್ಶನಕ್ಕೆ ತಮ್ಮದೇ ಆದ ಕಾರಣವನ್ನು ಸಹ ಹುಡುಕುತ್ತಾರೆ. ಬೇಂದ್ರೆಯವರ ಭೂಮಿತಾಯಿಯ ರೌದ್ರ ಮುಖ ಅನಾವರಣವಾಗುವುದು ಮನುಷ್ಯನ ರಾಜ್ಯದ ದುರಾಶೆಯ ರಾಜಕೀಯ ವಿದ್ಯಮಾನದ ಹಿನ್ನೆಲೆಯಲ್ಲಿ ಮಾತ್ರ. ಹಾಗೆಯೇ ಕೆ. ಎಸ್. ನರಸಿಂಹಸ್ವಾಮಿಯವರ ಭೂಮಿ ತಾಯಿ ಕೂಡ ಮನುಷ್ಯನು ಸ್ವಾರ್ಥದಿಂದ ಮಿತಿ ಮೀರಿ ನಡೆದಾಗ, ಅವರ

ಅಹಂಕಾರವನ್ನು ಕೊನೆಗಾಣಿಸಲು ಮಾತ್ರ ಆಕೆ ತನ್ನ ಕ್ರೌರ್ಯ ಮುಖದ ದರ್ಶನವನ್ನು ಮಾಡಿಸುತ್ತಾಳೆ. ಭೂಮಿಯ ಬಗೆಗಿನ ಅದಮ್ಯವಾದ ಪ್ರೀತಿ, ವಿಶ್ವಾಸ ಇವೆಲ್ಲಾ ಕೆ. ಎಸ್. ನರಸಿಂಹಸ್ವಾಮಿಯವರು ಭೂಮಿಯನ್ನು 'ತಾಯಿ' ಯಂತೆ ಕಾಣಲು ಅವಕಾಶವನ್ನು ಕಲ್ಪಿಸಿಕೊಟ್ಟಿದೆ.

ನವೋದಯ ಕಾಲದ ಒಬ್ಬ ಅನುಭಾವಿ ಕವಿಯೆಂದರೆ ಮಧುರಚೆನ್ನ. ಧಾರವಾಡದ ಗೆಳೆಯರ ಗುಂಪಿನ ಬೇಂದ್ರೆಯವರಷ್ಟೇ ಮಹತ್ವದ ಕೊಂಡಿ ಎಂದರೆ ಕವಿ ಮಧುರಚೆನ್ನ. ಆಧ್ಯಾತ್ಮಿಕ ಅನುಭವಗಳನ್ನು ಶ್ರೇಷ್ಠ ಮಟ್ಟದಲ್ಲಿ ಕಟ್ಟಿಕೊಟ್ಟಂತಹ ಧೀಮಂತ ಕವಿ ಮಧುರಚೆನ್ನ. ಆವರು 'ದೇವತಾ ಪೃಥಿವಿ' ಕವನದಲ್ಲಿ ಭೂಮಿಯನ್ನು ಅನುಭಾವದ ಪ್ರತೀಕವಾಗಿ ಚಿತ್ರಿಸಿದ್ದಾರೆ. ಆದ್ದರಿಂದಲೇ ಆಧುನಿಕ ಕನ್ನಡ ಕವನಗಳಲ್ಲೇ ಭೂಮಿಯನ್ನು ಕುರಿತಾದ ಕವನಗಳಲ್ಲೇ ಮಧುರಚೆನ್ನರ ' ದೇವತಾ ಪೃಥಿವಿ' ವಿಶಿಷ್ಟವಾದ ಸಾಲಿಗೆ ಸೇರುತ್ತದೆ.

ಭೂಮಿತಾಯಿ ಮನುಷ್ಯನಿಗೆ ಜನ್ಮನೀಡಿ ಅವನ ಲೌಕಿಕ ಬದುಕಿಗೆ ಒಂದು ಸ್ಥಾನವನ್ನು ಕಲ್ಪಿಸಿಕೊಟ್ಟಿದ್ದಾಳೆ.ಆದರೆ ಅನುಭಾವ ಕ್ಷೇತ್ರದಲ್ಲಿ ಆಸಕ್ತಿಯಿರುವ ವ್ಯಕ್ತಿಗೂ ಕೂಡ ಇದೇ ಭೂಮಿತಾಯಿ ಪ್ರೇರಕ ಶಕ್ತಿಯಾಗುತ್ತಾಳೆ. ಆ ವ್ಯಕ್ತಿ ಅನುಭಾವಕ್ಷೇತ್ರವನ್ನು ತಲುಪಲು ಭೂಮಿತಾಯಿ ಮೆಟ್ಟಿಲಾಗುತ್ತಾಳೆ. ಮೊಲೆಯಾಲನ್ನು ಕೊಟ್ಟು ಲೌಕಿಕ ಜೀವನಕ್ಕೆ ತಯಾರು ಮಾಡಿದ ಭೂಮಿತಾಯಿಯನ್ನು ಅನುಭಾವ ಕ್ಷೇತ್ರಕ್ಕೆ ಕರೆದೊಯ್ಯುವ ಶಕ್ತಿಯಾಗಿ ಮಧುರಚೆನ್ನರು ಗುರ್ತಿಸಿದ್ದಾರೆ.

*'ಮೊಲೆ ಹಾಲು ಸಾಕಮ್ಮಾ ಸವಿಲಾಲಿ ಬೇಕಮ್ಮಾ ।*

*ಮುದ್ದಾಡಿ ರಮಿಸಿ ಮೈದಡವ ಏಳಮ್ಮಾ।*

*ಮಲಲಗಿರುವ ತಾಯಿ ಪೃಥವೀ॥*

*ಮೊಲೆಹಾಲು ರುಚಿಗೊಂಡು ಮನದ್ಹಾಲು ಬಯಸೀನ।*

*ಗುಟು ಗುಟುಕಿಗೊಮ್ಮೆ ಮಿಕಿ ಮಿಕಿ ಏಳಮ್ಮಾ॥*

*ಮಲಗಿರುವ ತಾಯಿ ಪೃಥವೀ॥'* [21]

[ದೇವತಾ ಪೃಥವೀ]

ಭೂಮಿಯ ಮೇಲಿನ ಬದುಕನ್ನು ತಿರಸ್ಕರಿಸಿ ಆಧ್ಯಾತ್ಮಿಕ ಪ್ರಪಂಚಕ್ಕೆ ಬರಬೇಕೆಂದು ಯಾವ ಆಧ್ಯಾತ್ಮ ಧರ್ಮವು ಹೇಳುವುದಿಲ್ಲ. 'ಇಲ್ಲಿ, ಸಲ್ಲುವವರು

ಅಲ್ಲಿಯೂ ಸಲ್ಲುವವರು' ಎಂಬ ಮಾತಿನಂತೆ ಭೂಮಿಯ ಬದುಕನ್ನು ಚೆನ್ನಾಗಿ ಮಾಡಿದವರು ಆಧ್ಯಾತ್ಮಿಕ ಲೋಕದ ಜೀವನಕ್ಕೆ ಅರ್ಹರಾಗುತ್ತಾರೆ. ಆಧ್ಯಾತ್ಮ ಸ್ಥಿತಿಗೇರುವುದಕ್ಕೆ ಮೆಟ್ಟಿಲು ಎಂಬಂತೆ ಮಧುರಚೆನ್ನರವರು ಭೂಮಿಯನ್ನು ಅನುಭಾವದ ಪ್ರತೀಕವಾಗಿ ಚಿತ್ರಿಸಿದ್ದಾರೆ. ಹಾಗೆ ಭೂಮಿ ತಾಯಿ ಕೂಡ ವ್ಯಕ್ತಿಯನ್ನು ಆಧ್ಯಾತ್ಮಿಕ ಜೀವನಕ್ಕೆ ತಯಾರು ಮಾಡುವ ತಾಯಿಯಾಗಿದ್ದಾಳೆ ಎನ್ನುವುದು ಕೂಡ ಮಧುರಚೆನ್ನರ ಅಭಿಪ್ರಾಯವಾಗಿದೆ.

"ಪೃಥವಿಯ ಒಡಲಿನಲ್ಲಿಯೇ ದೇವತ್ವವನ್ನು ಕಾಣುವ ಹಂಬಲ, ಜಡ ಚೇತನಗಳೆಂಬುವು ಒಂದೇ ಶಕ್ತಿಯ ಎರಡು ಭಿನ್ನ ರೂಪಗಳು ಎಂಬ ನಂಬಿಕೆ ಈ ದರ್ಶನಕ್ಕೆ ಪ್ರೇರಕವಾಗಿದೆ. ತನ್ನ ಬಾಹ್ಯ ವ್ಯಕ್ತಿತ್ವದ ಪೋಷಣೆಗಾಗಿ ಹಸಿವನ್ನು ಹುಟ್ಟಿಸಿ ತೃಪ್ತಿಗಾಗಿ ಮೊಲೆಯನ್ನೂಡಿದ ಪೃಥವಿಯ ವಾತ್ಸಲ್ಯ ಆವಳ ಮನದ್ವಾಲಿನ ರುಚಿಯನ್ನು ನೋಡುವ ಹಸಿವನ್ನು ಕವಿಯಲ್ಲಿ ಕೆರಳಿಸಿದೆ"[22]

ಭೂಮಿತಾಯಿಯ ಸೌಂದರ್ಯದ, ಸಮೃದ್ಧತೆಯ ವರ್ಣನೆಗಿಂತ ಮಧುರಚೆನ್ನರು ಆಕೆಯನ್ನು ಆಧ್ಯಾತ್ಮಿಕತೆಯ ಪ್ರಪಂಚಕ್ಕೆ ರಹದಾರಿ ತೋರಿಸುವ ಬೆಳಕಾಗಿ ಕಂಡಿದ್ದಾರೆ. ಇದಕ್ಕೆ ಬಹುಶಃ ಅವರ ಮೇಲಾದ ಪಾಂಡಿಚೆರಿಯ ಅರವಿಂದಾಶ್ರಮದ ಪ್ರಭಾವವು ಕೂಡ ಮೇಳೈವಿಸಿದೆ. ಆದ್ದರಿಂದಲೇ ಮಧುರ ಚೆನ್ನರ ಭೂಮಿತಾಯಿ ಅನುಭಾವದ ನೆಲೆಯಲ್ಲಿ ಕಂಗೊಳಿಸುತ್ತಾಳೆ.

ನವೋದಯ ಕಾಲಘಟ್ಟದಲ್ಲಿ ಆದರ್ಶ, ಮೌಲ್ಯ, ಕಲ್ಪನೆಗೆ ಅತಿ ಹೆಚ್ಚಿನ ಪ್ರಾಧಾನ್ಯತೆ ಇತ್ತು. ಆದರೆ ನವ್ಯದಲ್ಲಿ ಈ ಎಲ್ಲಾ ತತ್ವಗಳಿಗೆ ವಿರುದ್ಧವಾದ ತತ್ವಗಳಿಗೆ ಸ್ಥಾನ ದೊರಕಿತು. ಎಲ್ಲಕ್ಕಿಂತ ಹೆಚ್ಚಾಗಿ ನವ್ಯದಲ್ಲಿ ಬದುಕಿನ ವಾಸ್ತವತೆಗೆ ಹೆಚ್ಚಿನ ಮನ್ನಣೆ ಸಿಕ್ಕಿತು. ಅಡಿಗರು ನವ್ಯತೆಯ ಬಗ್ಗೆ ಈ ರೀತಿಯ ವ್ಯಾಖ್ಯಾನವನ್ನು ನೀಡಿದ್ದಾರೆ.'ನವ್ಯವಾಗಿರುವುದು ಎಂದರೆ ವರ್ತಮಾನದ ಕ್ಷಣಗಳಿಗೆ ಸಂಪೂರ್ಣವಾಗಿ ಜೀವಂತವಾಗಿರುವುದು; ಸೃಜನಾತ್ಮಕ ಅಸ್ತಿತ್ವದ ಎಲ್ಲ ಹಂತಗಳಲ್ಲಿ ಜೀವಂತವಾಗಿರುವುದು. ಮಾನವ ಪ್ರಪಂಚದಲ್ಲಿ ಆಗುತ್ತಿರುವ ಸಕಲ ಬದಲಾವಣೆಗಳಲ್ಲೂ ಸಕಲ ವಿದ್ಯಮಾನಗಳಲ್ಲಿ ಪ್ರಜ್ಞಾಪೂರ್ವಕವಾಗಿ ಭಾಗಿಯಾಗುವುದು'[23] ಕಾಲ ಬದಲಾದಂತೆ ಸಾಹಿತ್ಯವೂ ಕೂಡ ಬದಲಾಗುತ್ತದೆ. ಪ್ರತಿಯೊಂದು ಕಾಲಘಟ್ಟಕ್ಕೂ ಅದರದ್ದೇ ಆದ ತತ್ವಗಳು ಇರುವುದರಿಂದ ಕಾಲ ಬದಲಾದಂತೆ ತತ್ವಗಳು ಸಹ ಬದಲಾಗುತ್ತದೆ. ಹಾಗೆಯೇ ತತ್ವಗಳ ಆಧಾರಿತವಾದ ಸಾಹಿತ್ಯವು ಕೂಡ ಕಾಲಕ್ಕೆ ತಕ್ಕಂತೆ ಬದಲಾಗುತ್ತದೆ.

1955ರ ನಂತರ ಕನ್ನಡ ಸಾಹಿತ್ಯದಲ್ಲಿ ಒಂದು ಹೊಸಗಾಳಿ ಬೀಸಲು ಆರಂಭಿಸಿತು. ಆಗ ಗೋಪಾಲಕೃಷ್ಣ ಅಡಿಗರು ನವೋದಯ ಸಾಹಿತ್ಯದ ಬಂಧದಿಂದ ಬಿಡಿಸಿಕೊಂಡು ಒಂದು ಅಪೂರ್ವವಾದ ಕಾಲಘಟ್ಟದ ಉಗಮಕ್ಕೆ ನಾಂದಿ ಹಾಡಿದರು. 'ಆ ಸಂಪ್ರದಾಯದ ಸತ್ವ ತೀರಿದೆ. ಅದಕ್ಕೆ ಅವನತಿ ಬಂದಿದೆ. ಅದರ ದೋಷಗಳೆಲ್ಲ ಎದ್ದು ಕಾಣುತ್ತಿವೆ. ಶಬ್ದಗಳು ಅರ್ಥದ ಸ್ಥಾನವನ್ನು ಆಕ್ರಮಿಸುತ್ತವೆ. ಪ್ರತಿಯೊಂದು ಭಾವವೂ ಅನುಭವವವೂ ಸತ್ವದಿಂದ ದೂರ ಹೋಗುತ್ತಿದೆ. ಇಂಥ ಕಾಲದಲ್ಲಿ ಕಾವ್ಯಕ್ಕೆ ವಾಸ್ತವದ ರಕ್ತದಾನ ನಡೆಯಬೇಕು. ಕಾವ್ಯಕ್ಕೆ ಮತ್ತೆ ಮಣ್ಣಿನ ವಾಸನೆ ಹೊಡೆಯಬೇಕು."[24].

ನವೋದಯ ಕಾಲಘಟ್ಟದಲ್ಲಿ ಭೂಮಿಯ ಪ್ರತಿಮೆ ಎಂದಿಗೂ ಸಮೃದ್ಧತೆಯ, ಸೌಂದರ್ಯದ, ವಾತ್ಸಲ್ಯ ಮತ್ತು ದೈವೀ ನೆಲೆಯಲ್ಲಿಯೇ ಕಾಣಿಸಿಕೊಳ್ಳುತ್ತಿತ್ತು. ಆದರೆ ನವ್ಯ ಕಾಲಘಟ್ಟದಲ್ಲಿ ಈ ಯಾವ ಅಂಶಗಳು ಕಾಣಸಿಗುವುದಿಲ್ಲ. ನವ್ಯ ಕಾವ್ಯದ ಪ್ರವರ್ತಕರಾದ ಅಡಿಗರ 'ಭೂಮಿಗೀತ'ದ ಭೂಮಿ ಪ್ರತೀಕವು ಸಹ ಇದೇ ನೆಲೆಗಟ್ಟಿನಲ್ಲಿ ರೂಪುಗೊಂಡಿದೆ.

'ಭೂಮಿ ಗೀತ' ಭೂಮಿ ಒಮ್ಮೆ ತಾಯಿಯಂತೆ ಲಾಲಿಸಿ, ಪೋಷಣೆ ಮಾಡಿ ಮಗುವನ್ನು ಬೆಳೆಸುತ್ತಾಳೆ. ಹಾಗೆ ಮತ್ತೊಮ್ಮೆ ಮಲತಾಯಿಯಂತೆ ಹಿಂಸೆಯನ್ನು ನೀಡುತ್ತಾಳೆ. ಭೂಮಿತಾಯಿ ಹೆತ್ತ ತಾಯಿಯಂತೆ ಪ್ರೀತಿಸುವುದು ಮತ್ತು ಮಲತಾಯಿ ಹಿಂಸಿಸುವುದು ಎರಡು ಕೂಡ ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಈ ಎರಡು ಮುಖಗಳು ಕೂಡ ವಾಸ್ತವ ನೆಲೆಗಟ್ಟಿನಲ್ಲಿ ರೂಪುಗೊಳ್ಳು ವಂತಹದ್ದು. ಇಂತಹ ಎರಡು ಮುಖಗಳ ಚಿತ್ರವನ್ನು 'ಭೂಮಿಗೀತದಲ್ಲಿ ನೋಡಬಹುದು'

**"ಕಬ್ಬಿನಾಲಲೆಯ ತಿರುಪಿನಲ್ಲಿ ಕುಳಿತೆರೆದಳು**

**ಅಜಸ್ರಧಾರೆಯ ಕರುಳತುಡಿತವನ್ನು**

**ಭತ್ತ ಗೋಧುವೆ ರಾಗಿಜೋಳ ಮೊರಮೊರವೌರಿಯಲ್ಲಿ**

**ಮಾಂಸದ ಹಾಡನೂಡಿಸಿದಳು**

**ಗಂಟೆ, ಗೋರಟೆ, ಜಾಜಿ, ಮಂದಾರ ಮಲ್ಲಿಗೆಯ**

**ಗಂಧರಿರಿಶಿಖರದಲ್ಲಿ ಮಲಗಿಸಿದ್ದು**

**ಹಕ್ಕಿಗೊರಳಿಂದುಗುವ, ತುಂಬಿ ಮರ್ಮರಮೊರೆವ**

**ಜಾಮೂನುನಾದದಲಿ ಜಾಳಿಸಿದಳು"**[25] (ಭೂಮಿಗೀತ)

ಇಂತಹ ಸುಂಧರವಾದ ಹೆತ್ರ ತಾಯಿಯಂತಹ ವಾತ್ಸಲ್ಯದ ಚಿತ್ರಣವು ಕವನದ ಮೊದಲಲ್ಲೆ ಲವಲವಿಕೆಯಿಂದ ಮೂಡಿಬಂದಿದೆ. ಇದು ಭೂಮಿತಾಯಿಯ ಒಂದು ಮುಖ. ತಾಯಿ ಮಗುವನ್ನು ಎಷ್ಟು ಪ್ರೀತಿಸುತ್ತಾಳೋ ಅಷ್ಟೇ ಕ್ರೂರಿಯೂ ಹೌದು. ಒಮ್ಮೆ ವಾತ್ಸಲ್ಯದ ಮೂರ್ತಿಯಾಗಿ ಕಂಡರೆ ಮರುಕ್ಷಣವೇ ಆಕೆ ರೌದ್ರ ನಾಯಕಿಯಾಗಿರುತ್ತಾಳೆ. ಅದು ಭೂಮಿ ತಾಯಿಯ ಇನ್ನೊಂದು ಮುಖ "ಗಂಗೆಯಲಿ ತೇಲಿ ಬಂದನು ಕರ್ಣ, ರಾಧೇಯ; ಸಾಯಿಸಲಿಕಲ್ಲದೇ ಬರಳು ಕುಂತಿ', 'ನೆಲತಾಯಿ ಮಲತಾಯಿ' ಎಂಬಂತಹ ಮಾತುಗಳ ಮೂಲಕ ಭೂಮಿತಾಯಿಯ ಇನ್ನೊಂದು ಮುಖದ ಪರಿಚಯವನ್ನು ಅಡಿಗರು ಮಾಡಿಸುತ್ತಿದ್ದಾರೆ. ಭೂಮಿತಾಯಿ ಮಲತಾಯಿಯಂತೆ, ಕುಂತಿಯಂತೆ ಜೀವವನ್ನೇ ಕೇಳುತ್ತಾಳೆ. 'ಧೃತರಾಷ್ಟ್ರನಪ್ಪುಗೆಗೆ ಭಗ್ನ ಬಲಭೀಮ, ಎಲ್ಲೂ ಕೃಷ್ಣನ ಕಾಪು ಕಾಣಲಿಲ್ಲ' ಎಂಬ ವಾಕ್ಯವು ಭೂಮಿ ತಾಯಿ ಕ್ರೂರತನವನ್ನು ಜೊತೆಗೆ ಅದರಿಂದ ರಕ್ಷಿಸಲು ಯಾರಿದಲೂ ಸಾಧ್ಯವಿಲ್ಲ ಎಂಬುದನ್ನು ಸೂಚಿಸುತ್ತದೆ. ಭೂಮಿತಾಯಿಯಿಂದ ಈತನಿಗೆ ಎಲ್ಲ ಗುಣಗಳು ಬಳುವಳಿಯಾಗಿ ಬಂದಿದೆ. ಅವಳ ಕ್ರೂರತನದಿಂದ ಬೇಸತ್ತ ಈತ ಭೂಮಿತಾಯಿಗೆ ದಿಟ್ಟತನದಿಂದ ಎದುರಾಗುತ್ತಾನೆ. ಆಕೆ ಕಲಿಸಿದ ಎಲ್ಲ ಗುಣಗಳನ್ನು ನಿರಾಕರಿಸುವುದರ ಮೂಲಕ ಭೂಮಿತಾಯಿಯನ್ನು ಎದುರಿಸಲು ಸಿದ್ಧನಾಗುತ್ತಾನೆ.

*'ತೆಗೆದುಕೋ ನೀ ಕೊಟ್ಟ ಎಲ್ಲ ವಸ್ತ್ರವಿಲಾಸ*

*ಈ ಕೋಟು, ಈ ಶರಟು, ಈ ಶರಾಯ;*

*ಈ ಭಗ್ನ ಜೋಪಡಿಯು ನಿನ್ನದೇ; ತೆಗೆದುಕೋ;*

*ಬತ್ತಲಾಗದೇ ಬಯಲು ಸಿಕ್ಕದಿಲ್ಲ'*[26]

[ಭೂಮಿಗೀತ]

ಲವಲವಿಕೆಯಿಂದ ಪ್ರಾರಂಭವಾಗುವ ಭೂಮಿಗೀತ ಕವನವು ವಿಷಾದದಲ್ಲಿ ಕೊನೆಯಾಗುತ್ತದೆ. ಅನಾಥ ಪರಕೀಯತೆಯಿಂದ ಪದ್ಯವು ಕೊನೆಯಗುತ್ತದೆ. ನವೋದಯ ಕಾಲಘಟ್ಟದಲ್ಲಿ ಬಂದ ಬೇಂದ್ರೆಯವರ ಭೂಮಿ ತಾಯಿಯಂತೆ ವಾತ್ಸಲ್ಯ ಮೂರ್ತಿಯಾಗಿ ಕಾಣಿಸಿದರೆ ನವ್ಯ ಕಾಲಘಟ್ಟದ ಅಡಿಗರ ಭೂಮಿ 'ಮಲತಾಯಿ' ಯಂತೆ ಕಾಣಿಸುತ್ತಾಳೆ. ಮಾನವ ಸೃಷ್ಟಿಗೆ ಕಾರಣಳಾದ ಭೂಮಿತಾಯಿ ಹೆತ್ತ ತಾಯಿಯಂತೆ ಮನುಷ್ಯನನ್ನು ಪರಿಪೂರ್ಣಗೊಳಿಸಲು ತನ್ನೆಲ್ಲಾ ಶಕ್ತಿಯನ್ನು ಧಾರೆಯೆರೆಯುತ್ತಾಳೆ. ಆದರೆ ನವ್ಯ ಕಾಲಘಟ್ಟದಲ್ಲಿ ಭೂ ತಾಯಿಯ ವಾತ್ಸಲ್ಯದ ಮುಖಕ್ಕಿಂತ ಆಕೆಯ ಕ್ರೌರ್ಯದ ಮುಖ ವಿಜೃಂಭಿಸುತ್ತದೆ. ಕೊನೆಗೆ ಅವಳ ಕ್ರೌರ್ಯದಿಂದ ಬೇಸತ್ತ ಮನುಷ್ಯನು ಅವಳನ್ನು ಧಿಕ್ಕರಿಸುವ ಧೈರ್ಯ ತೋರುವುದು ಇವೆಲ್ಲಾ ಕಾಲಘಟ್ಟದ ಮಹಿಮೆಗಳು.

ಭೂಮಿಯ ಮೇಲಿನ ಕೃತ್ಯಗಳಿಗೆ ಭೂಮಿತಾಯಿಯೇ ಕಾರಣ ಎಂದು ಆಕೆಯನ್ನು ನವೋದಯ ಕಾಲಘಟ್ಟದಲ್ಲೇ ಬಂದ ಕುವೆಂಪು ದೂರುತ್ತಾರೆ. ಅದಕ್ಕೆ ಅವರು ಬೆಳೆದು ಬಂದ ಪರಿಸರ ಮತ್ತು ಬೆಳೆಸಿ ಕೊಂಡ ವೈಚಾರಿಕತೆ ಕಾರಣವಾಗಿರುತ್ತದೆ. ಇದನ್ನು ಬಿಟ್ಟರೆ ಕುವೆಂಪು 'ಪ್ರಕೃತಿಯಾರಾಧನೆ' ಪರಮ ನಾರಾಧನೆ ಎಂದೇ ಭಾವಿಸಿಕೊಂಡು ಬಂದರು. ಆದರೆ ಇದೇ ಕಾಲಘಟ್ಟದಲ್ಲಿ ಬಂದ ಬೇಂದ್ರೆ, ಕೆ.ಎಸ್. ನರಸಿಂಹಸ್ವಾಮಿಯವರು ಭೂಮಿತಾಯಿಯನ್ನು ಮನುಷ್ಯ ತನ್ನ ಸ್ವಾರ್ಥಕ್ಕಾಗಿ ಬಳಸಿಕೊಳ್ಳುತ್ತಿ ದ್ದಾನಲ್ಲ ಎಂಬ ನೋವನ್ನು ತಮ್ಮ ಕಾವ್ಯಗಳಲ್ಲಿ ತೋಡಿಕೊಂಡಿದ್ದಾರೆ.

ನವೋದಯಕ್ಕಿಂತ ವಿಭಿನ್ನ ವಿಚಾರಧಾರೆಗಳನ್ನು ಇಟ್ಟುಕೊಂಡು ಬಂದದ್ದು ನವ್ಯ ನವೋದಯದ ಮಾವು, ಮಲ್ಲಿಗೆಯಂತಹ ನವಿರಾದ ಭಾವನೆಗಳಿಗೆ ಮಾತ್ರ ಮಣೆಯನ್ನು ಹಾಕದೇ ಜೀವನದ ಕಟುವಾಸ್ತವವನ್ನು ದರ್ಶನಮಾಡಿಸಿದ್ದು ಈ ನವ್ಯ ಸಾಹಿತ್ಯ ಮಾತ್ರ. ನವೋದಯ ಕಾಲಘಟ್ಟದ ಪ್ರೀತಿ, ವಾತ್ಸಲ್ಯ, ತಾಯಿ, ದೈವೀ ಕಲ್ಪನೆಗಳು ಆಧ್ಯಾತ್ಮಿಕತೆಗಳು ನವ್ಯ ಕಾಲಘಟ್ಟದಲ್ಲಿ ಬಹು ಕಟುವಾಗಿಯೇ ಪ್ರಶ್ನಿಸಲಾಯಿತು. ಅದರ ಫಲವಾಗಿಯೇ ಮಧುರಚೆನ್ನರ ಭೂಮಿತಾಯಿಯ ಅನುಭಾವದ ಕಲ್ಪನೆ ಸಂಪೂರ್ಣ ನಾಶವಾಗಿ, ಬೇಂದ್ರೆಯ ಭೂಮಿ ಎಂದರೆ ಹೆತ್ತತಾಯಿ ಎಂಬ ಕಲ್ಪನೆಯ ಜೊತೆಜೊತೆಗೆ ಆಕೆಯನ್ನು 'ಮಲತಾಯಿ' ಯ ರೂಪಿನಲ್ಲೂ ನವ್ಯ ಕಾವ್ಯದ ಪ್ರವರ್ತಕರಾದ ಅಡಿಗರು ನೋಡಿದರು. ಆದರೆ ಅಲ್ಲಿ ವಿಜೃಂಭಿಸಿದ್ದು ಭೂಮಿತಾಯಿಯ ಮಲತಾಯಿಯ ಮುಖವೇ ಹೊರತು ಹೆತ್ತತಾಯಿಯ ವಾತ್ಸಲ್ಯದ ಮುಖವಲ್ಲ. ನವ್ಯ ಕಾಲಘಟ್ಟದ ವಿಭಿನ್ನ ವಿಚಾರಧಾರೆಗಳು, ಪಾಶ್ಚಾತ್ಯ ಶಿಕ್ಷಣ ಮತ್ತು ಅಲ್ಲಿನ ಸಾಹಿತ್ಯ ಸಂವೇದನೆಗಳು ಈ ರೀತಿಯ ವ್ಯತ್ಯಾಸಕ್ಕೆ ಕಾರಣವಾಯಿತು.

'ಮನುಷ್ಯರ ಸುಖಕ್ಕೆ ಮನುಷ್ಯರೇ ಅಡ್ಡಾಗಿ ಬರುವಷ್ಟು ನಿಸರ್ಗ ಬರುವುದಿಲ್ಲ. ನಿಸರ್ಗಕ್ಕೇನು, ಹುಟ್ಟಿದವರ ಮೇಲೂ ಬೆಳಕು ಚೆಲ್ಲುತ್ತದೆ. ಸತ್ತವರ ಮೇಲೂ ಬೆಳಕು ಚೆಲ್ಲುತ್ತದೆ. ಮಾನವರ ದೌರ್ಬಲ್ಯವನ್ನು ನಿಸರ್ಗದ ಮೇಲೆ ಆರೋಪಿಸುವುದರಲ್ಲಿ ಅರ್ಥವಿಲ್ಲ. ಮಾಯಾವಾದದ ಜಾರುಕಣಿವೆ ಯಿಂದ ಹಾಯ್ದು ಹೋಗುವುದರಲ್ಲಿ ಉಪಾಯ ಕಂಡರೂ ಅಪಾಯ ಕಡಿಮೆಯಾಗುವುದಿಲ್ಲ. ನಿಸರ್ಗದ ರಮ್ಯತೆ, ಜೀವನದ ಭ್ರಮೆ ಇವೆರೆಡನ್ನೂ ತಪ್ಪಿಸಿ ಜೀವನ ತನ್ನ ದಿವ್ಯತ್ವದಿಂದ ಪ್ರಕಟವಾಗುವವರೆಗೆ ಭ್ರಮಿಸುವ ನೆಲಕ್ಕೆ ಉಪ್ಪು ನೀರಿನ ಸೆರೆ ತಪ್ಪಿದ್ದಲ್ಲ."[27]

ಈ ರೀತಿಯಾಗಿ ಕವಿ ಬೇಂದ್ರೆ ದೋಷವಿರುವುದು ಮನುಷ್ಯನಲ್ಲಿ ವಿನಾ – ಪ್ರಕೃತಿಯಲ್ಲಲ್ಲ ಎಂಬುದನ್ನು ಗುರ್ತಿಸಿದ್ದಾರೆ. ಆದ್ದರಿಂದಲೇ ಅವರ ಕವನಗಳಲ್ಲಿ

ಎಲ್ಲಿಯೂ ಭೂಮಿಯ ಮೇಲಿನ ಅನರ್ಥಗಳಿಗೆ ಭೂಮಿತಾಯಿಯನ್ನು ದೂಷಿಸುವುದಿಲ್ಲ. ಆದ್ದರಿಂದಲೇ ಅವರ ಭೂಮಿಯನ್ನು ಕುರಿತಾದ ಯಾವ ಕವನದಲ್ಲೂ ಭೂಮಿತಾಯಿ 'ಕ್ರೂರಿ' ಎಂಬ ಭಾವನೆಯು ವ್ಯಕ್ತವಾಗುವುದಿಲ್ಲ.

ಕವಿ ಬೇಂದ್ರೆ ಭೂಮಿಯನ್ನು ಒಳಗೊಂಡಂತೆ ಪ್ರಕೃತಿಯ ಎಲ್ಲಾ ವ್ಯಾಪಾರಗಳನ್ನು ಪ್ರೀತಿ, ವಿಶ್ವಾಸ, ವಾತ್ಸಲ್ಯ ದೈವೀ ಗುಣಗಳ ನೆಲೆಯಲ್ಲಿ ನೋಡಿದ್ದಾರೆ. ಇಂಥ ಪ್ರಕೃತಿಗೆ ಮನುಷ್ಯ ಅನ್ಯಾಯ ಮಾಡಿದಾಗ ಅದು ಪ್ರಕೃತಿ ಮೇಲೆ ಆಗುತ್ತಿರುವ ಶೋಷಣೆ ಎಂಬ ದೃಷ್ಟಿಯಿಂದ ಚಿತ್ರಿಸಿದ್ದಾರೆ. ಭೂಮಿಯ ಸೌಂದರ್ಯ ಮತ್ತು ತಾಯಿತನ ಎರಡನ್ನೂ ಕವಿ ಬೇಂದ್ರೆ ಚಿತ್ರಿಸಿದರೂ ಭೂಮಿಯ ತಾಯಿತನದ ಗುಣವನ್ನೇ ಹೆಚ್ಚಾಗಿ ಗುರ್ತಿಸಿದ್ದಾರೆ. ಸ್ತ್ರೀ ಪೋಷಿತ ಬಾಲ್ಯವು ಬೇಂದ್ರೆಯವರದ್ದಾರಿಂದ ಹೆಣ್ಣನ್ನು ಕೇವಲ ಹೆಣ್ಣಿನ ದೃಷ್ಟಿಯಿಂದ ನೋಡಲಾಗದೆ ಆಕೆಗೆ ತಾಯಿಯ ಗುಣವನ್ನು ಅರೋಪಿಸುತ್ತಾರೆ. ಭೂಮಿಯಲ್ಲಿ ಮನುಷ್ಯನ ವಿಕಾಸಕ್ಕೆ ಅನುವು ಮಾಡಿಕೊಡುವ ತಾಯಿತನದ ಗುಣವನ್ನು ಗುರ್ತಿಸಿಯೇ ಕವಿ ಬೇಂದ್ರೆ ಭೂಮಿಗೆ ತಾಯಿತನದ ಗುಣವನ್ನು ಆರೋಪಿಸುತ್ತಾರೆ.

# ಅಧ್ಯಾಯ ನಾಲ್ಕು

## ಬೇಂದ್ರೆಯವರ ಕಾವ್ಯದಲ್ಲಿ ಭಾರತಮಾತೆ

19 ನೇ ಶತಮಾನದಲ್ಲಿ ವಸಾಹತು ಶಾಹಿಯ ಆಕ್ರಮಣದಿಂದಾಗಿ ಭಾರತವು ತತ್ತರಿಸಿತು. ಭಾರತದ ಜನತೆಗೆ ಇಂತಹ ರಾಜೀಯ ಆಕ್ರಮಣಗಳು ಹೊಸದೇನಾಗಿರಲಿಲ್ಲ. ಭಾರತದ ಅನೇಕ ರಾಜವಂಶಗಳು ತಮ್ಮ ಅಧಿಕಾರದ ಲಾಲಸೆಗಾಗಿ, ರಾಜ್ಯ ವಿಸ್ತರಣೆಗಾಗಿ ಪ್ರದೇಶಗಳ ಮೇಲೆ ದಂಡೆತ್ತಿ ಹೋಗಿ ಅದನ್ನು ವಶಪಡಿಸಿಕೊಂಡು ತಮ್ಮ ಆಳ್ವಿಕೆಗೆ ಒಳಪಡಿಸಿದ್ದರು. ಆಯಾ ಪ್ರದೇಶಗಳ ಪ್ರಜೆಗಳು ಕೂಡ ತಮ್ಮನ್ನು ಆಳುವ ರಾಜರಿಗೆ ನಿಷ್ಠರಾಗಿ ನಡೆದುಕೊಳ್ಳುತ್ತಿದ್ದರು. ಆದರೆ ಇದ್ದಕ್ಕಿದ್ದಂತೆಯೇ 19 ನೇ ಶತಮಾನದಲ್ಲಿ ವಸಹಾತುಶಾಹಿಯ ಆಕ್ರಮಣವು ಭಾರತದ ಜನತೆಗೆ ಆಘಾತವನ್ನು ನೀಡಿತ್ತು. ಆಕ್ರಮಣವು ಭಾರತದ ಜನತೆಗೆ ಹೊಸದೇನೂ ಆಗಿರಲಿಲ್ಲವಾದರೂ ತಮ್ಮದಲ್ಲದ ಅನ್ಯಸಂಸ್ಕೃತಿಯ ಆಕ್ರಮಣಕ್ಕೆ ಅವರು ತತ್ತರಿಸಿದರು. ಇದುವರೆಗೂ ತಮ್ಮ ಮೇಲೆ ದಾಳಿ ಮಾಡಿದವರಿಗೆ ಯಾವುದೇ ವಿಶಿಷ್ಟವಾದ ಪ್ರತಿಕ್ರಿಯೆಯನ್ನು ಭಾರತದ ಜನತೆ ನೀಡಿರಲಿಲ್ಲ. ಏಕೆಂದರೆ ತಮ್ಮನ್ನು ಆಳುತ್ತಿರುವವರು ತಮ್ಮ ಸಂಸ್ಕೃತಿಯ ಒಂದು ಭಾಗದವರೆಂದು ಅವರು ತಿಳಿದುಕೊಂಡಿದ್ದರು. ಈಗ ತಮ್ಮ ಮೇಲೆ ಆಕ್ರಮಣ ಮಾಡಿದವರು ಅನ್ಯದೇಶೀಯರು, ಅನ್ಯಸಂಸ್ಕೃತಿಯವರೆಂದು ತಿಳಿದು ಭಾರತದ ಜನತೆ ಈ ಆಕ್ರಮಣವನ್ನು ವಿರೋಧಿಸಿದರು. ಈ ವಸಾಹತುಶಾಹಿಯು ಭಾರತವನ್ನು ಕೇವಲ ಭೌಗೋಳಿಕವಾಗಿ ಮಾತ್ರವಲ್ಲದೆ ಸಾಂಸ್ಕೃತಿಕವಾಗಿಯೂ ಆಕ್ರಮಿಸಿತು. ಅಲ್ಲದೆ ತನ್ನ ಸಂಸ್ಕೃತಿಯನ್ನು ತೃತೀಯ ಜಗತ್ತಾದ ಭಾರತದ ಸಂಸ್ಕೃತಿಯ ಮೇಲೆ ಬಲವಂತವಾಗಿ ವಸಾಹತುಶಾಹಿಯು ಹೇರತೊಡಗಿತು. ಇದು ಹಿಂಸಾ ಪ್ರವೃತ್ತಿಯನ್ನು ಹೊಂದಿದಾಗ ಭಾರತದ ಜನತೆ ಇದನ್ನು ಉಗ್ರವಾಗಿ ವಿರೋಧಿಸಲು ಪ್ರಾರಂಭಿಸಿದರು.

ವಸಾಹತುಶಾಹಿ ರಾಷ್ಟ್ರವು ತನ್ನ ಅಧೀನ ರಾಷ್ಟ್ರವಾದ ಭಾರತಕ್ಕೆ ವ್ಯಾಪಾರಕ್ಕೆ ಎಂದು ಬಂದು ನಿಧಾನವಾಗಿ ತನ್ನ ದಬ್ಬಾಳಿಕೆಯ ಮನೋಭಾವವನ್ನು ಪ್ರದರ್ಶಿಸತೊಡಗಿತು. ತನ್ನ ಆಡಳಿತದ ಅನುಕೂಲಕ್ಕಾಗಿ ಅಥವಾ ರಾಷ್ಟ್ರದಲ್ಲಿ ಅನೇಕ ಬದಲಾವಣೆಗಳನ್ನು ತಂದಿತು. ಅಧೀನ ರಾಷ್ಟ್ರವಾದ ಭಾರತವು ವಸಾಹತುಶಾಹಿ ರಾಷ್ಟ್ರದ ಈ ಬದಲಾವಣೆಗಳನ್ನು ತನ್ನ ರಾಷ್ಟ್ರದಲ್ಲಿ ಆದ ಸುಧಾರಣೆ ಎಂದು ತಪ್ಪಾಗಿ ಭಾವಿಸಿದರೂ ಅದು ವಸಾಹತುಶಾಹಿ ರಾಷ್ಟ್ರವು ಅಧೀನ ರಾಷ್ಟ್ರಕ್ಕೆ ಕೊಟ್ಟ ಕೊಡುಗೆ ಎನ್ನುವಂತಿಲ್ಲ. ಏಕೆಂದರೆ ವಸಾಹತುಶಾಹಿ ರಾಷ್ಟ್ರಕ್ಕೆ ತನ್ನ ಅಧೀನ ರಾಷ್ಟ್ರದ ಸುಧಾರಣೆ ಬೇಕಿರಲಿಲ್ಲ. ಅದರ ಬದಲು ಅದಕ್ಕೆ ತನ್ನ ಆಡಳಿತದ ಅನುಕೂಲವೇ ಮುಖ್ಯವಾಗಿತ್ತು.

ವಸಾಹತುಶಾಹಿ ರಾಷ್ಟ್ರವು ತನ್ನ ಆಡಳಿತದ ಅನುಕೂಲಕ್ಕಾಗಿ ಭಾರತದಲ್ಲಿ ಮಾಡಿದ ಅನೇಕ ಬದಲಾವಣೆಗಳಲ್ಲಿ ಇಂಗ್ಲೀಷ್ ಶಿಕ್ಷಣದ ಜಾರಿ ಒಂದು ಪ್ರಮುಖವಾಗಿದೆ. ಈ ರೀತಿಯ ಶಿಕ್ಷಣ ಪದ್ಧತಿಯಿಂದಾಗಿ ಭಾರತೀಯ ವಿದ್ಯಾರ್ಥಿಗಳಿಗೆ ಐದು ಶತಮಾನಗಳಿಗೂ ಹೆಚ್ಚಿನ ಕಾಲದ ಇಂಗ್ಲೀಷ್ ಸಾಹಿತ್ಯದ ಪರಿಚಯವಾಯಿತು. ಮಿಲ್ಟನ್, ಷೆಲ್ಲಿ, ಬ್ರೌನಿಂಗ್, ವರ್ಡ್ಸ್‌ವರ್ತ್ ಷೇಕ್ಸ್‌ಪಿಯರ್ ಮೊದಲಾದ ಅನೇಕ ಪ್ರಸಿದ್ಧ ವಿದ್ವಾಂಸರ ಕೃತಿಗಳು ಪಠ್ಯ ಪುಸ್ತಕವಾಯಿತು. ಇದರ ಜೊತೆಗೆ ಇಂಗ್ಲೆಂಡಿನ ಇತಿಹಾಸವು ವಿದ್ಯಾರ್ಥಿಗಳಿಗೆ ಪರಿಚಯವಾಯಿತು. ಇದರ ಪರಿಣಾಮವಾಗಿ ಭಾರತೀಯ ವಿದ್ಯಾರ್ಥಿಗಳಿಗೆ ಇಂಗ್ಲೆಂಡಿನ ಸ್ವತಂತ್ರ ಜೀವನ, ಸರಿ–ತಪ್ಪು ಎಂಬುದನ್ನು ವಿಶ್ಲೇಷಿಸುವ ಮನೋಭಾವ, ಪ್ರಶ್ನಿಸದೆ ಎಲ್ಲವನ್ನು ಒಪ್ಪಿಕೊಳ್ಳದ ಮನೋಸ್ಥಿತಿ ಎಲ್ಲವೂ ಮೂಡಿ ಬಂತು. ಇಂಗ್ಲೆಂಡಿನ ಜೊತೆಗೆ ತಮ್ಮ ದೇಶವನ್ನು ಹೋಲಿಕೆ ಮಾಡಿ ತಮ್ಮ ದೇಶದ ಪರಿಸ್ಥಿತಿಗೆ ಈ ವಸಾಹತುಶಾಹಿ ರಾಷ್ಟ್ರದ ಆಕ್ರಮಣವೇ ಕಾರಣವೆಂದು ಅಂದಿನ ವಿದ್ಯಾವಂತ ವಿದ್ಯಾರ್ಥಿಗಳಿಗೆ ಅರಿವಾಯಿತು.

ವಸಾಹತುಶಾಹಿ ಪ್ರಕ್ರಿಯೆಗೆ ಭಾರತದ ಜನತೆ ಮಾತ್ರವಲ್ಲದೆ ಭಾರತದ ಸಂಸ್ಕೃತಿಯ ಒಂದು ಭಾಗವಾದ ಸಾಹಿತ್ಯವು ಕೂಡ ತನ್ನದೇ ಆದ ಪ್ರತಿಕ್ರಿಯೆಯನ್ನು ನೀಡಿತು. ವಸಾಹತುಶಾಹಿಯ ಇಂಗ್ಲೀಷ್ ಶಿಕ್ಷಣದ ಪರಿಣಾಮವಾಗಿಯೇ ಕ್ರಮೇಣ ಅಧೀನ ರಾಷ್ಟ್ರವಾದ ಭಾರತಕ್ಕೆ ತನ್ನ ಸಂಸ್ಕೃತಿಯನ್ನು ಉಳಿಸಿಕೊಳ್ಳುವಲ್ಲಿ ಒಂದು ವಿಶಿಷ್ಟವಾದ ಮನೋಭಾವವು ಉಂಟಾಯಿತು. ಅಧೀನ ರಾಷ್ಟ್ರಕ್ಕೆ ತಮ್ಮನ್ನು ಆಳುತ್ತಿರುವವರ ಸಂಸ್ಕೃತಿಯು ತಮ್ಮ ಸಂಸ್ಕೃತಿಗಿಂತ ಮಿಗಿಲಾದದ್ದು ಎಂಬ ಭಾವನೆಯು ತಮ್ಮ ಕಾಂತಿಯನ್ನು ಕಳೆದುಕೊಂಡಿರುವ ಸಂಸ್ಕೃತಿಯನ್ನು ಉಳಿಸಿಕೊಳ್ಳಬೇಕು ಎಂಬುದಕ್ಕೆ ಸಹಾಯ ಮಾಡಿತು. ಕ್ರಮೇಣ ಭಾರತೀಯ ಜನತೆಯು ತಮ್ಮ ಅಭಿಮಾನದ ಸಂಕೇತವಾದ ಸಂಸ್ಕೃತಿಯೊಂದನ್ನು ವಸಾಹತುಶಾಹಿ ಸಂಸ್ಕೃತಿಯ ಸಮಕ್ಕೆ ಕಟ್ಟಬೇಕೆಂಬ ಆಸೆಯನ್ನಿಟ್ಟುಕೊಂಡು ಆ ನಿಟ್ಟಿನಲ್ಲಿ ಮುಂದುವರೆದರು.

ಕನ್ನಡ ಸಾಹಿತ್ಯವು ವಸಾಹತುಶಾಹಿ ಪ್ರಕ್ರಿಯೆಗೆ ಪ್ರತಿಕ್ರಿಯಿಸಿದ ರೀತಿಯಲ್ಲಿ ಎರಡು ಧಾರೆಗಳನ್ನು ವಿದ್ವಾಂಸರು ಗುತಿರಸಿದ್ದಾರೆ ಮೊದಲನೆಯದು ವಸಾಹತುಶಾಹಿ ಪ್ರಕ್ರಿಯೆಗೆ ಬಿ.ಎಂ.ಶ್ರೀ ಯವರ ಪ್ರತಿಕ್ರಿಯೆ. ಇವರು ವಸಾಹತುಶಾಹಿ ಸಂಸ್ಕೃತಿಯ ಬಿರುಗಾಳಿಗೆ ಸಿಕ್ಕಿ ಕುಗ್ಗಲಿಲ್ಲ. ಹಾಗೆಯೇ ತಮ್ಮ ರಾಷ್ಟ್ರದ ಮೇಲಿನ ಅತಿಯಾದ ಅಭಿಮಾನದಿಂದಾಗಿ ವಸಾಹತುಶಾಹಿಯ ವಿರುದ್ಧ ಉಗ್ರವಾದ ಪ್ರತಿಭಟನೆಯನ್ನು ಅವರು ತೋರಿಸಲಿಲ್ಲ. ಬದಲಿಗೆ ನಾವು ಬಿ.ಎಂ.ಶ್ರೀ ಯವರ ಸಾಹಿತ್ಯದಲ್ಲಿ ಕನ್ನಡ ಮತ್ತು ಇಂಗ್ಲೀಷ್ ಭಾಷೆಯ ಸಾಮರಸ್ಯವನ್ನು ಗುರ್ತಿಸಬಹುದಾಗಿದೆ.

*ಹೀಗೆ ನನಗೆ ಹಬ್ಬವಾಗಿ*

*ಇನಿಯರಿಬ್ಬರನ್ನು ತೂಗಿ,*

*ಇವಳ ಸೊಬಗನವಳು ತೊಟ್ಟು,*

*ನೋಡಬಯಸಿದೆ;*

*ಅವಳ ತೊಡಿಗೆ ಇವಳಿಗಿಟ್ಟು*

*ಹಾಡಬಯಸಿದೆ. ।*

(ಕಾಣಿಕೆ)

ಎರಡನೇಯದು ವಸಾಹತುಶಾಹಿ ಪ್ರಕ್ರಿಯೆಗೆ ಅನುಭಾವಿ ಕವಿಗಳ ಪ್ರತಿಕ್ರಿಯೆ. ವಸಾಹತುಶಾಹಿ ಪ್ರಕ್ರಿಯೆಗೆ ಬಿ.ಎಂ.ಶ್ರೀ ಯವರಿಗಿಂತ ವಿಭಿನ್ನವಾಗಿ ಅನುಭಾವಿ ಕವಿಗಳು ಪ್ರತಿಕ್ರಿಯಿಸಿದರು. ಬಿ.ಎಂ.ಶ್ರೀಗೆ ಬ್ರಿಟೀಷರ ಆಳ್ವಿಕೆಯಿಂದ ತಮ್ಮ ದೇಶಕ್ಕೆ ಒಳಿತಾಗುತ್ತದೆಂಬ ಆಶಾಭಾವನೆಯಿತ್ತು. ಆದರೆ ಅನಕ್ಷರಸ್ಥ ಈ ಅನುಭಾವಿ ಕವಿಗಳು ಬ್ರಿಟೀಷರ ದಬ್ಬಾಳಿಕೆಯ ವಿರುದ್ಧ ತಮ್ಮದೇ ಆದ ಪ್ರತಿಮೆಗಳ ಮೂಲಕ ವಿರೋಧಿಸಲು ಆರಂಭಿಸಿದರು. ಶಿಶುನಾಳ ಶರೀಫರ 'ಗಿರಣಿಯ ವಿಸ್ತಾರ' 'ಜಿಟ್ಟಿಯ ಹುಳ ಎದ್ದಾವು ನೋಡೊ' ಇಂತಹ ಕವನಗಳು. "ಈ ಅನುಭಾವೀ ಕವಿಗಳು ತಮ್ಮ ಅಂತರಂಗದ ಸೂಕ್ಷ್ಮ ಕಂಪನಗಳನ್ನು, ಆರೋಗ್ಯಕರ ಪ್ರೇಮವನ್ನು, ಬ್ರಿಟೀಷರ ದಬ್ಬಾಳಿಕೆ ಮತ್ತು ಕ್ರೂರ ಯಂತ್ರ ನಾಗರಿಕತೆಯ ಸಂದರ್ಭದಲ್ಲಿ ಅಭಿವ್ಯಕ್ತಿಸಿದರು. ತಮ್ಮ ಸುತ್ತಣ ಸಮಾಜದ ಸಮುದಾಯದ ಸಂದರ್ಭಗಳಲ್ಲಿ ಅಭಿವ್ಯಕ್ತಿಸಿದರು. ತಮ್ಮ ಸುತ್ತಣ ಸಮಾಜದ ಸಮುದಾಯದ ಸಂದರ್ಭಗಳಲ್ಲಿ ನಾಶಗೊಳ್ಳುತ್ತಿದ್ದ ಮನುಷ್ಯ ಸಂಬಂಧಗಳನ್ನು ಕುರಿತು ಅವರು ಬರೆದರು. ಅವರ ಚರ್ಚೆಗಳಲ್ಲಿ ರಾಜಕೀಯ ಕೋಲಾಹಲ, ಅಸ್ಥಿರ ಆರ್ಥಿಕ ಬದುಕು, ಗುಲಾಮಗಿರಿಗೆ ತಮಗೆ ಅರಿವಿಲ್ಲದಂತೆಯೇ ಒಳಗಾದ ಸ್ಥಿತಿ – ಇವುಗಳ ಹಿನ್ನೆಲೆಯಲ್ಲಿ ತಮ್ಮ ಪ್ರಸ್ತುತವನ್ನು ಗುರುತಿಸಿಕೊಂಡಿರುವ ಸ್ವರೂಪವನ್ನು ಆ ರಚನೆಗಳಲ್ಲಿ ಕಾಣಬಹುದು"[2]

ಇಂತಹ ಅನ್ಯದೇಶೀಯದ ಸಂಸ್ಕೃತಿಯ ದಬ್ಬಾಳಿಕೆಯ ವಿರುದ್ಧವೇ ರಾಷ್ಟ್ರೀಯತೆಯು ಉಗಮವಾಗುತ್ತದೆ. ಈ ರಾಷ್ಟ್ರೀಯತೆಯು ವಸಾಹತುಶಾಹಿಯ ವಿರುದ್ಧ ಹೋರಾಟವನ್ನು ಮಾಡುತ್ತದೆ. ಇಡೀ ರಾಷ್ಟ್ರವನ್ನು ಈ ನಿಟ್ಟಿನಲ್ಲಿ ಅದು ತಯಾರು ಮಾಡುತ್ತದೆ. ನವೋದಯ ಕಾವ್ಯದ ಸಂದರ್ಭದಲ್ಲಿ ರಾಷ್ಟ್ರೀಯತೆಗೆ ಒಂದು ವಿಶಿಷ್ಟವಾದ ಸ್ಥಾನವಿದೆ. ವಿಭಿನ್ನ ಕವಿಗಳ ಕಾವ್ಯಗಳಲ್ಲಿ ವಿಭಿನ್ನವಾಗಿ ಈ ರಾಷ್ಟ್ರೀಯತೆಯು ಮೂಡಿ ಬಂತು.

ಭಾರತದ ಇತಿಹಾಸದಲ್ಲಿ ಸ್ವಾತಂತ್ರ್ಯದ ಚಳುವಳಿಯು ಒಂದು ಪ್ರಮುಖವಾದ ಘಟ್ಟವಾಗಿದೆ. ಹಳ್ಳಿ ಹಳ್ಳಿಯಲ್ಲಿಯೂ ಸ್ವಾತಂತ್ರ್ಯ ಹೋರಾಟವು ಆಗ ಪ್ರಾರಂಭವಾಗಿತ್ತು. ರಾಷ್ಟ್ರ ನಾಯಕರು ಅಲ್ಲಲ್ಲಿ ಜನರನ್ನು ಈ ಹೋರಾಟಕ್ಕೆ ಸಿದ್ಧ ಮಾಡುತ್ತಿದ್ದರು. ಇವರ ಈ ಪ್ರಯತ್ನಕ್ಕೆ ಕೈ ಜೋಡಿಸಿದವರೆಂದರೆ ಆಗಿನ ನಮ್ಮ ಕವಿಗಳು. ಈ ಕವಿಗಳು ತಮ್ಮ ಸತ್ವಯುತವಾದ ಭಾಷೆಯಿಂದ ಕೂಡಿದ ಅನೇಕ ಕವನಗಳನ್ನು ರಚಿಸಿ ಜನರಲ್ಲಿ ರಾಷ್ಟ್ರೀಯ ಚಳುವಳಿಯ ಅರಿವನ್ನು ಮೂಡಿಸಿದರು.

ಕುವೆಂಪು, ಪು.ತಿ.ನ ಮೊದಲಾದ ಕವಿಗಳು ಬೇಂದ್ರೆಯವರಂತೆ ನೇರವಾದ ಸ್ವಾತಂತ್ರ್ಯ ಚಳುವಳಿಯ ಅನುಭವವನ್ನು ಪಡೆಯಲಿಲ್ಲ. ಅಂದಿನ ಸ್ವಾತಂತ್ರ್ಯ ಚಳುವಳಿಯ ನೇರವಾದ ಅನುಭವವನ್ನು ಬೇಂದ್ರೆಯವರು ಪಡೆದಿದ್ದರು. ಬೇಂದ್ರೆಯವರು ತಮ್ಮ ಅಜ್ಜಿ ಗೋದುಬಾಯಿಯವರು ನಡೆಸುತ್ತಿದ್ದ ಖಾನಾವಳಿಯಿಂದ ಈ ಸ್ವಾತಂತ್ರ್ಯ ಚಳುವಳಿಯ ಅನೇಕ ವಿಚಾರಗಳನ್ನು ಬಹಳ ಚಿಕ್ಕ ವಯಸ್ಸಿನಿಂದಲೇ ತಿಳಿಯುತ್ತಿದ್ದರು. ಬೇಂದ್ರೆಯವರು ತಮ್ಮ ಖಾನಾವಳಿಗೆ ಬರುತ್ತಿದ್ದ ವಿಚಾರವಂತರ ಮೂಲಕ ಸ್ವಾತಂತ್ರ್ಯ ಚಳುವಳಿಯ ಅನೇಕ ಸೂಕ್ಷ್ಮ ವಿಚಾರಗಳನ್ನು ತಿಳಿದುಕೊಳ್ಳುತ್ತಿದ್ದರು. ಬೇಂದ್ರೆಯವರ ಮನಸ್ಸಿಗೆ ಸ್ವಾತಂತ್ರ್ಯ ಚಳುವಳಿಯ ರಾಷ್ಟ್ರೀಯ ಪ್ರಜ್ಞೆಯು ಈ ಖಾನಾವಳಿಯಿಂದ ಮೂಡಿ ಬಂತು. ಈ ಮೂಲ ಪ್ರಜ್ಞೆಯೇ ಮುಂದೆ ಅವರ ಕವನಗಳಲ್ಲಿ ಒಂದು ಪ್ರಮುಖಧಾರೆಯಾಗಿ ಹರಿದು ಬಂತು.

ಈ ಭಾರತ ಮಾತೆ ನಾವು ಇಲ್ಲಿ ಜನ್ಮತಾಳಲು ಅವಕಾಶ ಮಾಡಿಕೊಟ್ಟಿದ್ದಾಳೆ. ಒಬ್ಬ ವ್ಯಕ್ತಿಯ ವ್ಯಕ್ತಿತ್ವವು ರೂಪುಗೊಳ್ಳುವುದಕ್ಕೆ ಇಲ್ಲಿನ ಮಣ್ಣಿನ ಗುಣವು ಸೇರಿಕೊಂಡಿರುತ್ತದೆ. ಭಾರತದಲ್ಲಿ ಹುಟ್ಟಿದ ಎಲ್ಲರೂ ಒಂದೇ ತಾಯಿಯ ಮಕ್ಕಳು. ಆದರೆ ಕಾಲಕ್ರಮೇಣ ಧರ್ಮ, ಜಾತಿ, ಭಾಷೆ, ಬಣ್ಣ ಸಂಸ್ಕೃತಿ, ಉಡುಪು ಈ ಮೊದಲಾದ ಭೇದಗಳಲ್ಲಿ ನಾವು ಸಿಕ್ಕಿಹಾಕಿಕೊಂಡೆವು. ಈ ಭೇದವನ್ನು ಮರೆತರೆ ನಾವು ಇಂದಿಗೂ ಕೂಡ ಒಂದೇ ತಾಯಿಯ ಮಕ್ಕಳು. ನಮ್ಮೆಲ್ಲರ ತಾಯಿ ಆ ಭಾರತಮಾತೆ. ಆಕೆಯ ಮೈಯಿಂದ ರೂಪುಗೊಂಡ ಅನ್ನವನ್ನು ತಿಂದು ಇಂದು ನಾವು ದೈಹಿಕವಾಗಿ ರೂಪುಗೊಂಡಿದ್ದೇವೆ. ಇಂತಹ ಭಾರತಮಾತೆಯ ಆಶ್ರಯವಿಲ್ಲದೆ ನಮಗೆ ನೆಲೆಯಿಲ್ಲ. ನಾವೆಲ್ಲ ಬೇರೆ ಬೇರೆ ಜಾತಿ, ಪಂಥಗಳಿಗೆ ಸೇರಿದ್ದರೂ ನಮಗೆಲ್ಲ ತವರು ಮನೆಯಾಗಿರುವುದೇ ಈ ಭರತ ಮಾತೆಯಲ್ಲಿ ಎನ್ನುವ ತತ್ವವನ್ನು ಬೇಂದ್ರೆಯವರು ಮಂಡಿಸಿದ್ದಾರೆ. ಅನೈಕ್ಯತೆಯಲ್ಲಿ ಏಕತೆ ಎಂಬ ಮಾತು ಇಲ್ಲಿ ಮೂರ್ತಗೊಂಡಿದೆ.

*"ಒಂದೆ ತಾಯಿಯ ಮಕ್ಕಳು*

*ಒಂದೆ ತವರ್ಮನೆ ಒಕ್ಕಲು*

*ಬಣ್ಣ ಬಣ್ಣದ ಜನರು ನಾವಿಂದೊಂದು ಗೂಡಲು ಬಂದೆವು*

*ಮಣ್ಣ ಭೇದವನೆಣಿಸದೇ ಒಂದೆದೆಯ ಬಲವನು ತಂದೆವು*

*ತಾಯಿ ನೆಲವೇ ಅನ್ನವೆಂದೇ ನಿನ್ನ ಮೈಯ್ಯನ್ನುಂಡೆವು*

*ತಾಯಿ ಮೊಲೆವಾಲೆಂತು ತೊರೆವುದೊ ಅಂತು ಸೆಲೆಗಳ ಕಂಡೆವು"*[3]

(ಒಂದೆ ತಾಯಿಯ ಮಕ್ಕಳು)

'ರಾಷ್ಟ್ರ' ಎಂಬುದು ಪೂರ್ಣಗೊಳ್ಳುವುದು ಅಲ್ಲಿನ ಪ್ರಜಾ ಸಂಪತ್ತಿನಿಂದಾಗಿ. ಇಲ್ಲಿನ ಭಾರತಮಾತೆ 'ಜನವೇ ರಾಷ್ಟ್ರವು, ರಾಷ್ಟ್ರವೇ ಜನವು' ಎಂಬ ಹೊಸ ಶ್ರುತಿಯನ್ನು ನುಡಿಯುತ್ತಿದ್ದಾಳೆ. ಬೇಂದ್ರೆಯು ಭಾರತಮಾತೆ ಮೂಲಕ 'ರಾಷ್ಟ್ರ' ಎಂಬ ಕಲ್ಪನೆಗೆ ಹೊಸ ಅರ್ಥವನ್ನು ನೀಡುತ್ತಾರೆ.

*"ಶ್ರಾವಣ ಮಾಸಕೆ ಶ್ರವಣಕೆ ಸಾರಿತು*

*ಭಾರತಮಾತೆಯ ಹೊಸಾ ಶ್ರುತೀ*

*ಜನವೇ ರಾಷ್ಟ್ರವು; ರಾಷ್ಟ್ರವೇ ಜನವು*

*ಸಾರ್ವಭೌಮ ಮಾನವನ ಸ್ತುತಿ"*[4]

(ಜನವೇ ರಾಷ್ಟ್ರ)

19ನೇ ಶತಮಾನದಲ್ಲಿ ಬ್ರಿಟೀಷರ ದಬ್ಬಾಳಿಕೆಯು ಭಾರತೀಯರ ಮೇಲೆ ಅತಿಯಾಗಿತ್ತು. ಬ್ರಿಟೀಷರ ಹಿಂಸಾಪೂರಿತವಾದ ಈ ದಬ್ಬಾಳಿಕೆಯನ್ನು ಕಂಡು ಭಾರತೀಯರು ತತ್ತರಿಸಿ ಹೋದರು. ಇಂತಹ ಸಂದರ್ಭದಲ್ಲಿ ಬೇಂದ್ರೆಯವರು 1930ರಲ್ಲಿ 'ಗರಿ' ಕವನ ಸಂಕಲನವನ್ನು ಪ್ರಕಟಿಸಿದರು. ಅದರಲ್ಲಿನ 'ನರಬಲಿ' ಎಂಬ ಪದ್ಯವು ಬ್ರಿಟೀಷ್ ಸರ್ಕಾರವನ್ನು ಕೆರಳಿಸಿತು. ಅವರ ರಾಷ್ಟ್ರ ಭಕ್ತಿಗಾಗಿ ಬ್ರಿಟೀಷ್ ಸರ್ಕಾರವು ಬೇಂದ್ರೆಯವರಿಗೆ ಹಿಂಡೇಗಾ ಜೈಲಿನಲ್ಲಿ ಶಿಕ್ಷೆಯನ್ನು ವಿಧಿಸಿತು. ಈ ಶಿಕ್ಷೆಯಿಂದ ಬೇಂದ್ರೆಯವರು ಎದೆಗುಂದಲಿಲ್ಲ. ವಸಾಹತುಶಾಹಿ ಪ್ರಕ್ರಿಯೆಗೆ ಧೈರ್ಯವಾಗಿ ಪ್ರತಿಕ್ರಿಯಿಸುವುದನ್ನು ಸಹ ಬಿಡಲಿಲ್ಲ.

ಭಾರತಮಾತೆ ಇಂದು ಬ್ರಿಟೀಷರ ಬಂಧಿಯಾಗಿದ್ದಾಳೆ. ಅವಳನ್ನು ಬ್ರಿಟೀಷರು ತಮ್ಮ ಕಪಿಮುಷ್ಠಿಯಲ್ಲಿಟ್ಟುಕೊಂಡು ನಾನಾ ರೀತಿಯಾಗಿ ತೊಂದರೆ ಕೊಡುತ್ತಿದ್ದರು. ಇದನ್ನು ಕಂಡ ಭಾರತಮಾತೆಯ ಮಕ್ಕಳಿಗೆ ತಾವು ಹೇಗಾದರೂ ತಮ್ಮ ತಾಯಿಯನ್ನು ಬ್ರಿಟೀಷರ ಸೆರೆಯಿಂದ ಬಿಡಿಸಲೇಬೇಕೆಂಬ ಹಠ ಹುಟ್ಟಿತು. 'ಇಗೋ ಹೊರಟೆವು ಬಿಡುಗಡೆಗಾಗಿ ಬಹ । ರಾರು ನಮಗಿದಿರಾಗಿ?' ಎಂಬ ಮಾತಿನಲ್ಲಿಯೇ ಭಾರತಮಾತೆಯ ಮಕ್ಕಳ ದೃಢನಿರ್ಧಾರದ ಜೊತೆಗೆ ತಮ್ಮ ದಾರಿಗೆ ಅಡ್ಡ ಬರುವ ಧೈರ್ಯ ಯಾರಿಗೂ ಇಲ್ಲ ಎನ್ನುವಂತಹ ಅಚಲವಾದ ವಿಶ್ವಾಸವು ಅವರಿಗಿದೆ. ಇಂತಹ ವಿಶ್ವಾಸದಿಂದಲೇ ಮುನ್ನುಗ್ಗಿದರೆ ಮಾತ್ರ ತಾಯಿಯ ಸೆರೆಯನ್ನು ಬಿಡಿಸಲು ಸಾಧ್ಯ ಎನ್ನುವುದು ಬೇಂದ್ರೆಯವರ ನಂಬಿಕೆಯಾಗಿದೆ. ಎಂದಿಗೆ ನಾವು ತಾಯಿಯನ್ನು ಬ್ರಿಟೀಷರ ಸೆರೆಯಿಂದ ಬಿಡಿಸುತ್ತೇವೆಯೋ ಅಂದು ಮರೆಯಾಗಿದ್ದ ಅವಳ ಮಂದಹಾಸ ಮತ್ತೆ ಮೂಡಿತ್ತದೆ. ಅಲ್ಲಿಯವರೆಗೂ ಬ್ರಿಟೀಷರು ಆಕ್ರಮಿಸಿದ ಈ ನಾಡು ಸೆರೆಯಮನೆಯೇ ಆಗಿರುತ್ತದೆ ಎಂಬುದು ಬೇಂದ್ರೆಯವರ ಅಭಿಮತ.

*"ಗೋ । ಣೆನೊಳಿದೆ ಬಿಟ್ಟಿಯ ನೊಗವು*

*ಕೆಳ । ಗೊಗೆವುದೆ ಜೀವಕೆ ಸೊಗವು*

*ಅಂ । ದರಳ್ವುದು ತಾಯಿಯ ಮೊಗವು*

*ಅದು । ವರೆಗೂ ಸೆರೆಮನೆ ಜಗವು*

*ಅದಕಾಗಿ । ತಾಗಿ । ಸಾಗಿ ।"* [5]

(ಇಗೊ ಹೊರಟೆವು ಬಿಡುಗಡೆಗಾಗಿ)

ಭಾರತದೊಡನೆ ಚೀನ ದೇಶವು ಪಂಚಶೀಲ ಒಪ್ಪಂದಕ್ಕೆ ಸಹಿ ಹಾಕಿತು. ಭಾರತ ಮತ್ತು ಚೀನಾ ದೇಶದ ಗಡಿರೇಖೆಯು ನಿರ್ಧಾರವಾದ ಮೇಲೆ ಚೀನಾ ಭಾರತದ ಮೇಲೆ ಆಕ್ರಮಣ ಮಾಡಿತು. ಇದಕ್ಕೆ ಸೂಕ್ಷ್ಮ ಮನಸ್ಸಿನ ಬೇಂದ್ರೆಯವರು ತಮ್ಮದೇ ಆದ ರೀತಿಯಲ್ಲಿ ಪ್ರತಿಕ್ರಿಯಿಸಿದರು.

*"ಇತಿಹಾಸದಲ್ಲಿ ನಂಬಿಕೆಯಿಲ್ಲ ಭೂಗೋಲ!*

*ನೀನು ಗೆರೆ ಹಾಕಿದ್ದೆ ನಿನ್ನ ಬಾಯಿ*

*ಮರ್ಯಾದೆ ಮಾತಿನದು ಹಾದಿಯಲ್ಲವೆ ಅಣ್ಣಾ*

*ಕರೆವಳು ನಿನ್ನ ಚಾಮುಂಡಿ ತಾಯಿ"* [6]

(ಶ್ರೀಮನ್ ಮಹಾಭಾರತ)

ಒಪ್ಪಂದಕ್ಕೆ ಸಹಿ ಹಾಕಿದ ಚೀನಾ ಮಾತಿಗೆ ತಪ್ಪಿ ಆಕ್ರಮಣವನ್ನು ಮಾಡಿದೆ. ಇದು ಮರ್ಯಾದೆಯ ಹಾದಿಯಲ್ಲ. ಈ ರೀತಿ ಮರ್ಯಾದೆ ಹಾದಿಯಲ್ಲಿ ಬರದವನನ್ನು ಶಿಕ್ಷಿಸಲು ತಾಯಿ ಕರೆಯುತ್ತಾಳೆ ಎನ್ನುವುದನ್ನು ಸಾಧ್ಯವಾದಷ್ಟು ಸೌಮ್ಯವಾದ ಭಾಷೆಯಲ್ಲಿ ಹೇಳಿದ್ದಾರೆ. ಹೀಗೆ ಮಾತಿಗೆ ತಪ್ಪಿದ ಚೀನಾ ದೇಶವನ್ನು ದುಷ್ಟ ಬುದ್ಧಿಗೆ, ಸಹೃದಯಿ ಭಾರತವನ್ನು ಚಂದ್ರಹಾಸನಿಗೆ ಹೋಲಿಸಿ ಚಂದ್ರಹಾಸನನ್ನನು ಕೊಲ್ಲಲು ಹೋದ ದುಷ್ಟ ಬುದ್ಧಿ ತನ್ನ ಸಂಚಿಗೆ ತಾನೇ ಬಲಿಯಾದಂತೆ ಚೀನಾ ದೇಶವು ಅವನತಿಯನ್ನು ಹೊಂದುತ್ತದೆ ಎಂದು ಬೇಂದ್ರೆಯವರು ಸಂಕೇತದ ರೂಪದಲ್ಲಿ ಚಿತ್ರಿಸಿದ್ದಾರೆ. ದುಷ್ಟಜನರಿಗೆ ನಾಶ ಖಚಿತ ಎಂಬ ಭಾವ ಇಲ್ಲಿ ಅಂತರ್ಗತವಾಗಿದೆ.

*"ಚಂದ್ರಹಾಸನ ದೈವಲೀಲೆ ಭಾರತರೆಂದು*
*ದುಷ್ಟಬುದ್ಧಿಯ ಮಕರ ಹೃದಯ ನಿನಗೆ*
*ಚಂಡಿಕಾಲಯದಲ್ಲಿ ಕಾದಿಹುದು ನಿನ್ನ ವಿಧಿ*
*ದುರ್ಗೆ; ಕಾಲಿಯ ಬಲವು ನಮಗೆ ಕೊನೆಗೆ"*[7]

(ಶ್ರೀಮನ್ ಮಹಾಭಾರತ)

1940–42 ಎರಡನೇ ಮಹಾಯುದ್ಧದ ಕಾಲ. ವಿಶ್ವದ ರಾಷ್ಟ್ರವೆಲ್ಲಾ ಈ ಯುದ್ಧಕ್ಕೆ ಸಜ್ಜಾಗುತ್ತಿದ್ದರು. ಆಗ ಭಾರತದಲ್ಲೂ ರಾಷ್ಟ್ರೀಯತೆಯು ಹೋರಾಟವು ಉತ್ತುಂಗಕ್ಕೇರಿತ್ತು. ಹಾಗೆಯೇ ಭಾರತದ ಜನತೆಯಲ್ಲಿಯೇ ಒಳ ಜಗಳಗಳು ಮನೆಯ ಮಾಡಿದ್ದವು. ಬ್ರಿಟೀಷರು ಈ ಎರಡನೇ ಮಹಾಯುದ್ಧ ಮುಗಿದ ನಂತರ ಭಾರತಕ್ಕೆ ಸ್ವಾತಂತ್ರ್ಯ ನೀಡುವುದಾಗಿ ಘೋಷಿಸಿದರು. ಹಾಗೆಯೇ ಈ ಮಹಾಯುದ್ಧದಲ್ಲಿ ತಮಗೆ ಬೆಂಬಲವಾಗಿ ಭಾರತವು ಬರಬೇಕೆಂದು ಬಯಸಿದರು. ಮಹಾಯುದ್ಧ ಮುಗಿದ ನಂತರ ಸ್ವಾತಂತ್ರ್ಯವು ದೊರೆಯುತ್ತದೆಂಬ ಆಸೆಯಿಂದ ಭಾರತದ ರಾಷ್ಟ್ರನಾಯಕರು ಮಹಾಯುದ್ಧಕ್ಕೆ ಸಜ್ಜಾದರು. ಅಂತಹ ಸಂದರ್ಭದಲ್ಲಿ ಬೇಂದ್ರೆ ತಾಯಿಯ ಋಣವನ್ನು ತಮ್ಮ ದೇಶದ ಪರವಾಗಿ ಹೋರಾಡುವುದರ ಮೂಲಕ ತೀರಿಸುವ ಅವಕಾಶವನ್ನು ಜನರ ಮುದೆ ಇಟ್ಟರು. ಈ ಮೂಲಕ ಭಾರತಮಾತೆಯ ಸೇವೆಗೆ ಕರೆಯನ್ನು ನೀಡಿದ್ದಾರೆ.

*'ಯುದ್ಧ ಬಂತು ಮನೆಯವರೆಗೆ*
*ಬನ್ನಿ ಒಂದಾಗಿರಿ,*
*ಒಳ ಜಗಳವ ಕ್ಷಣವೆ ನಿಲಿಸಿ*
*ನಮ್ಮ ಜನವ ಒಲಿದು ಒಲಿಸಿ*
*ತಾಯಿ ನೆಲಕೆ ಸೇವೆ ಸಲಿಸಿ*
*ನಿಮ್ಮ ಹಗೆಯ ತಾಗಿರಿ'*[8]

(ಯುದ್ಧ ಬಂತು ಮನೆಯವರೆಗೆ)

ಭಾರತ ಮಾತೆಯು ತನ್ನ ಮಡಿಲಲ್ಲಿ ಮಕ್ಕಳಿಗೊಂದು ಸ್ಥಾನವನ್ನು, ನೆಲೆಯನ್ನು ನೀಡಿದ್ದಾಳೆ. ಆಕೆ ಸಕಲ ಚರಾಚರಗಳಿಗೂ ಧೈರ್ಯವನ್ನು ತುಂಬುವ ಧೈರ್ಯದಾತೆಯಾಗಿದ್ದಾಳೆ. ಆಕೆಯ ವಾಸಸ್ಥಾನವೇ ಪವಿತ್ರವಾದದ್ದು. ಈ ವಿಶ್ವದಲ್ಲಿ ಅನೇಕ ರಾಷ್ಟ್ರಗಳಿವೆ. ಇಂತಹ ಅನೇಕ ರಾಷ್ಟ್ರಗಳು ತಮ್ಮ ನಡುವಿನ ಭೇದಭಾವವನ್ನು ಮರೆತು ಸಾಮರಸ್ಯದಿಂದ ಕೂಡಿದಾಗ ಇಡೀ ವಿಶ್ವವೇ ಏಕರಾಷ್ಟ್ರವಾಗುತ್ತದೆ. ನಂತರ ಎಲ್ಲ ರಾಷ್ಟ್ರದ ವಿಭಿನ್ನ ಬಣ್ಣದ ಜನರು ಭಾವದಲ್ಲಿ ಒಂದಾಗಿ ಒಂದೇ ಬಣ್ಣವಾಗುತ್ತಾರೆ. ಇಂತಹ ಸಾಮರಸ್ಯವನ್ನು ಜೀವನ ಮೌಲ್ಯವನ್ನು ಆ ಭಾರತಮಾತೆ ನಮಗೆ ಕಲಿಸಲಿ ಎಂಬುದು ಬೇಂದ್ರೆಯವರು ಅಭಿಪ್ರಾಯಪಡುತ್ತಾರೆ. ಅವರ ಪ್ರಕಾರ ಭಾರತಮಾತೆ ಕೇವಲ ಜನ್ಮ ನೀಡಿದವಳು ಮಾತ್ರವಲ್ಲದೆ ಆಕೆ ಸಾಮರಸ್ಯದ ಪಾಠ ಕಲಿಸುವ ಗುರುವೂ ಆಗಲಿ ಎಂಬುದು ಬೇಂದ್ರೆಯವರ ಆಶಯವಾಗಿದೆ.

*"ಕೂಡಿ ನಡೆ, ಕೂಡಿ ನುಡಿ*

*ಮೂಡಿಸು ನೀ ನಮ್ಮಲಿ*

*ಅದೇ ಸ್ವಂತ ಅದೇ ಪಂಥ*

*ಅದೇ ಬಾಳಿನಾ ಬೆಲೆ"*

**(ಮಾತೃವಂದನ)**

ಬೇಂದ್ರೆಯವರ ರಾಷ್ಟ್ರೀಯತೆಯು ಸೌಮ್ಯತೆಯಿಂದ ಕೂಡಿದೆ. ಅವರ ಕಾವ್ಯಭಾಷೆಯಿಂದ ಬ್ರಿಟೀಷರ ವಿರುದ್ಧ ಅಸಾಧ್ಯವಾದ ಕೋಪ ಇದ್ದರೂ, ಅವರ ಕಾವ್ಯ ಭಾಷೆಯಲ್ಲಿ ಆ ರೋಷವು ಕಾಣಿಸುವುದಿಲ್ಲ. ಬದಲಿಗೆ ದೇಶದ ಈ ಪರಿಸ್ಥಿತಿಯನ್ನು ಹೊಡೆದೋಡಿಸಲು ಪ್ರತಿಯೊಬ್ಬ ಮನುಷ್ಯನು ಸಿದ್ಧನಾಗಬೇಕೆಂಬ ಕರೆಯನ್ನು ಬೇಂದ್ರೆಯು ನೀಡುತ್ತಾರೆ. ಬೇಂದ್ರೆಯವರು ಸಾಮಾಜಿಕ ಪರಿವರ್ತನೆಗಿಂತ ವ್ಯಕ್ತಿಯ ಹೃದಯ ಪರಿವರ್ತನೆಯಲ್ಲಿ ಹೆಚ್ಚು ನಂಬಿಕೆಯನ್ನು ಇಟ್ಟಿದ್ದಾರೆ. ಆದ್ದರಿಂದಲೇ ಬೇಂದ್ರೆಯವರ ರಾಷ್ಟ್ರೀಯತೆಯನ್ನು ಕುರಿತು ಇರುವ ಕವನಗಳಲ್ಲಿ ರೋಷದ, ಆಕ್ರೋಶದ ಧ್ವನಿ ಇರುವುದಿಲ್ಲ. ಬದಲಿಗೆ ಈ ದೇಶದ ಪರಿಸ್ಥಿತಿಯನ್ನು ಸರಿಪಡಿಸಲು ದೇಶದ ಪ್ರಜೆಗಳಿಗೆ ಕರೆ ನೀಡಿದಂತಿರುತ್ತದೆ. ಭಾರತಮಾತೆಯನ್ನು ಅಪಮಾನಕ್ಕೆ ಗುರಿ ಮಾಡಿದವರನ್ನು ನಾಶಪಡಿಸುವಂತೆ ಭಾರತಮಾತೆಯ ಮಕ್ಕಳನ್ನು ಹುರಿದುಂಬಿಸುತ್ತಾರೆ ಅಷ್ಟೇ. ಅಲ್ಲಿ ಕಿಚ್ಚಿನ ಧ್ವನಿ ಇರುವುದಿಲ್ಲ.

*"ನುಗ್ಗಿರಣ್ಣ ರಣದ ಕಣಕೆ*

*ಅಸುರರಿಂದ ಬಿಡಿಸಿರಿ*

*ತಾಯ ಸೆರೆಯ ಎಲ್ಲರಿಂದ*

*ಗೆಲುವಿನ ಗುಡಿ ಹಿಡಿಸಿರಿ*

*ಭೂಮಿ ದೇವಿ ನಲಿಯುವಂತೆ*

*ವಿಜಯಗೀತ ನುಡಿಸಿರಿ"* [10]

(ಸ್ವಾತಂತ್ರ್ಯ ದೇವಿಗೆ)

ಆದರೆ ಇವರ ಸಮಕಾಲೀನರಾದ ಕುವೆಂಪು ವಸಾಹತುಶಾಹಿಯ ವಿರುದ್ಧ ತೀವ್ರವಾದ ಧೋರಣೆಯನ್ನು ತಳೆದಿದ್ದರು. "ಆದರೆ ಆ ಕಾಲ ಹಾಗಿತ್ತು. ಎಲ್ಲಿಯೂ ಎಲ್ಲದರಲ್ಲಿಯೂ ನಾವು ಸ್ವಾತಂತ್ರ್ಯದ ಹೋರಾಟವನ್ನೇ ಕಾಣುತ್ತಿದ್ದ ಕಾಲ! ಸಮಯ ಸಂದರ್ಭ ಸಿಕ್ಕಿದರೆ ಸಾಕು, ಬ್ರಿಟೀಷರನ್ನು ಖಂಡಿಸುತ್ತಿದ್ದ ಕಾಲ..... ಪತ್ರಿಕೆಗಳಲ್ಲಿ ಸತ್ಯಾಗ್ರಹದ ಮತ್ತು ಸ್ವಾತಂತ್ರ್ಯ ಚಳುವಳಿಯ ಸುದ್ದಿಗಳನ್ನು ಓದಿದ್ದ ಕವಿಯ ಮನಸ್ಸು ಹೃದಯ ಪ್ರಾಣ ಎಲ್ಲದರಲ್ಲಿಯೂ ಬೆಂಕಿ ವ್ಯಾಪಿಸಿತ್ತು"[11] ಎಂದು ಕುವೆಂಪುರವರೇ ತಾವು ತೀವ್ರವಾದಿಯಾದದ್ದಕ್ಕೆ ಒಂದು ಕಾರಣವನ್ನು ಹೇಳಿಕೊಂಡಿದ್ದಾರೆ. ಕುವೆಂಪುರವರ ಬಹುತೇಕ ರಾಷ್ಟ್ರೀಯ ಕವನಗಳು ತೀವ್ರವಾದ ಮನೋಸ್ಥಿತಿಯನ್ನು ಬಿಂಬಿಸುತ್ತವೆ. ಆ ಕವನಗಳ ಪ್ರತಿಯೊಂದು ಸಾಲಿನಲ್ಲಿಯೂ ಆಕ್ರೋಶದ ಧ್ವನಿಯು ಮಡುಗಟ್ಟಿ ನಿಂತಿವೆ.

*"ನೋಡದೋ ನೋಡಲ್ಲಿ;*

*ದರ್ಪರಥದಡಿಯಲ್ಲಿ*

*ಹೊರಳುತಿರುವಳು ತಾಯಿ*

*ನೆತ್ತರಿನ ಪುಡಿಯಲ್ಲಿ*

*ಬಾಳನೊರೆಯಿಂದ ಹಿರಿ*

*ನುಗ್ಗು ನಡೆ, ಕಟ್ಟ ಹರಿ !"* [12]

(ಪಾಂಚಜನ್ಯ)

ಜಿ.ಎಸ್. ಶಿವರುದ್ರಪ್ಪನವರು ಕುವೆಂಪುರವರ ಈ ರಾಷ್ಟ್ರೀಯ ಕವನಗಳನ್ನು ಕುರಿತು ಈ ರೀತಿಯ ಮಾತುಗಳನ್ನು ಹೇಳುತ್ತಾರೆ : ಸ್ವಾತಂತ್ರ್ಯದ ಘೋರಾಟಕ್ಕೆ ಕುವೆಂಪು ಅವರು ನೀಡಿದ ಸ್ಫೂರ್ತಿ ಅತ್ಯಂತ ಗಮನಾರ್ಹವಾದುದು. ಅವರ 'ಪಾಂಚಜನ್ಯ' ಕವನ ಸಂಗ್ರಹ ಮತ್ತು 'ಕೋಗಿಲೆ ಮತ್ತು ಸೋವಿಯತ್ ರಷ್ಯಾ' ದ ಕೆಲವು ಕವನಗಳು ಅಂದಿನ ಹೋರಾಟಗಾರರಿಗೆ ಮಂತ್ರವಾಗಿದ್ದಿರಬೇಕು. ಹೋರಾಟಕ್ಕೆ ಅಗತ್ಯವಾದ ಆವೇಶ, ಧೈರ್ಯ, ಉಜ್ವಲಾದರ್ಶ ಇತ್ಯಾದಿಗಳು ಅಪೂರ್ವವಾದ ರೀತಿಯಲ್ಲಿ ಅವರಲ್ಲಿ ಅಭಿವ್ಯಕ್ತವಾಗಿವೆ."[13]



ಬೇಂದ್ರೆ ಪು.ತಿ.ನ ಮೊದಲಾದ ಕವಿಗಳು ವಸಾಹತುಶಾಹಿಯ ವಿರುದ್ಧ ರೊಚ್ಚನ್ನು ಪ್ರಕಟಿಸಲಿಲ್ಲ. ಆದರೆ ಸಮಾಜದ ಶಾಂತಿಗೆ ಭಂಗ ತರುವ ಯಾವುದೇ ಶಕ್ತಿಯ ವಿರುದ್ಧ ಉಗ್ರವಾಗಿ ಪ್ರತಿಭಟಿಸಿದವರೆಂದರೆ ಕುವೆಂಪು ಇವರಲ್ಲಿಯೇ ಮುಂದೆ ಬಂದ ಬಂಡಾಯದ ಧ್ವನಿಯು ಮೂಲ ಬೇರುಗಳನ್ನು ನಾವು ಗುರ್ತಿಸಬಹುದಾಗಿದೆ. ಈ ರೀತಿಯ ಉಗ್ರ ನೀತಿಗೆ ಅವರ ವೈಚಾರಿಕ ಪ್ರಜ್ಞೆಯೇ ಮೂಲ ಕಾರಣವಾಗಿದೆ.

ಹೀಗೆ ರಾಷ್ಟ್ರೀಯ ಚಳುವಳಿಯು ತನ್ನ ಸಮಕಾಲೀನ ಕನ್ನಡ ಸಾಹಿತ್ಯವನ್ನು ತೀವ್ರವಾಗಿ ಪ್ರಭಾವಿಸಿತು. ರಾಷ್ಟ್ರೀಯತೆಯು ನವೋದಯ ಕನ್ನಡ ಸಾಹಿತ್ಯದ ಪ್ರಮುಖ ಲಕ್ಷಣವಾಗಿ ಮೂಡಿ ಬಂದಿದೆ. ಕ್ರೈಸ್ತ ಮಿಷನರಿಗಳು ಭಾರತೀಯ ಸಂಸ್ಕೃತಿಯನ್ನು ಅನಗತ್ಯವಾಗಿ ಟೀಕಿಸಿ ಎಲ್ಲರನ್ನು ಮತಾಂತರಕ್ಕೆ ಗುರಿಪಡಿಸಲು ಹವಣಿಸಿದರು. ಆಗ ಈ ದೇಶದ ಬುದ್ಧಿಜೀವಿಗಳು, ಸಾಹಿತಿಗಳು ವಿದ್ವಾಂಸರು ತಮ್ಮ ಸಂಸ್ಕೃತಿಯಲ್ಲಿದ್ದ ಹುಳುಕುಗಳನ್ನು ತ್ಯಜಿಸಿ ತಮ್ಮ ಸಂಸ್ಕೃತಿಯನ್ನು ಮತ್ತೆ ಕಟ್ಟುವ ಪ್ರಯತ್ನ ಮಾಡಿದರು. ನಮ್ಮ ದೇಶದಲ್ಲಿದ್ದ ಜಾತಿವ್ಯವಸ್ಥೆ, ಧರ್ಮ, ಮೂಢನಂಬಿಕೆ, ಕಂದಾಚಾರ ಇವುಗಳನ್ನೆಲ್ಲಾ ತಮ್ಮ ವಿಚಾರವಂತಿಕೆಯ ಮೂಲಕ ಖಂಡಿಸಿದರು. ಈ ರೀತಿಯ ಖಂಡನೆಯನ್ನು ತಮ್ಮ ಸಾಹಿತ್ಯದ ಮೂಲಕ ನಿರ್ಬಿಡೆಯಿಂದ ಮಾಡಿದವರೆಂದರೆ ಆಗಿನ ನವೋದಯ ಕವಿಗಳಲ್ಲಿ ಕುವೆಂಪು ಮಾತ್ರ.

ಬೇಂದ್ರೆಯವರ ಕಾವ್ಯವು ಕೂಡ ಸಮಕಾಲೀನ ಪರಿಸ್ಥಿತಿಗೆ ತೀವ್ರವಾಗಿ ಪ್ರತಿಕ್ರಿಯಿಸಿದೆ. ವಸಾಹತುಶಾಹಿಯ ವಿರುದ್ಧ ಬೇಂದ್ರೆಯವರು ಕುವೆಂಪುರವರಂತೆ ತೀವ್ರವಾಗಿ ಸ್ಪಂದಿಸಿದೆ ಹೋದರೂ, ಅದನ್ನು ವ್ಯಂಗ್ಯವಾದ ರೀತಿಯಲ್ಲಿ ವಿಡಂಬಿಸಿದ್ದಾರೆ. ಕುವೆಂಪುರವರಂತೆ ಕಿಚ್ಚಿನ ಮಾತುಗಳು ಅವರ ಕಾವ್ಯಭಾಷೆಯಲ್ಲಿ ಕಾಣದಿದ್ದರೂ ವ್ಯಂಗ್ಯವನ್ನು ಬೇಂದ್ರೆ ತಮ್ಮ ಕಾವ್ಯದಲ್ಲಿ ಹೇರಳವಾಗಿ ಬಳಸಿದ್ದಾರೆ. ವ್ಯಕ್ತಿಯ ಹೃದಯದ ಪರಿವರ್ತನೆ ಮತ್ತು ವ್ಯಂಗ್ಯ ಇವೆರಡು ಬೇಂದ್ರೆಯ ರಾಷ್ಟ್ರೀಯ

ಕವನಗಳ ಒಂದೆ ಕೆಲಸ ಮಾಡಿರುವ ಶಕ್ತಿಗಳಾಗಿವೆ. ಭಾರತ ಮಾತೆ ಇಂದು ದುಸ್ಥಿತಿಯಲ್ಲಿದ್ದಾಳೆ. ಆದರೆ ಅವಳ ದುಸ್ಥಿತಿಯಿಂದ ಪಾರು ಮಾಡುವ ಧೈರ್ಯ ಎದೆಗಾರಿಕೆ ಅವಳ ಯಾವ ಮಕ್ಕಳಿಗೂ ಇಲ್ಲ. ಭಾರತಮಾತೆ ಮೂವತ್ತು ಮೂರು ಕೋಟಿ ಮಕ್ಕಳಿಗೆ ಜನ್ಮ ನೀಡಿದ್ದಾಳೆ. ಆದರೆ ಅದರಲ್ಲಿ ಒಬ್ಬನು ಕೂಡ ಅವಳನ್ನು ಪಾರು ಮಾಡುವ ಧೈರ್ಯ ತೋರುತ್ತಿಲ್ಲ. ಇದು ಸಹಜವಾಗಿಯೇ ಭಾರತಮಾತೆಗೆ ನೋವನ್ನುಂಟು ಮಾಡಿದೆ. ಅವಳ ವ್ಯಂಗ್ಯಭರಿತವಾದ ಪ್ರಶ್ನೆಗೆ ಯಾವ ಭಾರತೀಯನ ಕೆಚ್ಚು ತಾನೆ ಕೆರಳುವುದಿಲ್ಲ? ಇಂತಹ ವ್ಯಂಗ್ಯಪೂರಿತವಾಗಿ ಬೇಂದ್ರೆ ಭಾರತೀಯರಲ್ಲಿರುವ ಕೆಚ್ಚನ್ನು ಕೆರಳಿಸುವ ಕೆಲಸ ಮಾಡುತ್ತಾರೆ.

*"ಮಕ್ಕಳಿವರೇನಮ್ಮ? ಮಕ್ಕಳಿವರೇನಮ್ಮ*

*ಮೂವತ್ತು ಮೂರು ಕೋಟಿ?*

*ನಾ ಹಡೆದ*

*ಮೂವತ್ತು ಮೂರು ಕೋಟಿ !"*[4]

(ಮೂವತ್ತು ಮೂರು ಕೋಟಿ)

ಬೇಂದ್ರೆಯವರು ವ್ಯಕ್ತಿ ಜೀವನ, ಪ್ರಕೃತಿ ಈ ಮೊದಲಾದವುಗಳ ಮೇಲೆ ತೋರಿಸಿದಷ್ಟು ಆಸಕ್ತಿ ರಾಜಕೀಯ, ಸ್ವಾತಂತ್ರ್ಯ ಚಳುವಳಿ ಮೊದಲಾದವುಗಳಿಗೆ ತೋರಲಿಲ್ಲ ಎಂದೆನಿಸುತ್ತದೆ. ಸ್ವಾತಂತ್ರ್ಯ ಚಳುವಳಿಗೆ ಬೇಂದ್ರೆ ಸ್ಪಂದಿಸಿದರೂ ಆ ಎಲ್ಲ ಕವನಗಳ ಮುಖ್ಯಧಾರೆ ನೇರವಾಗಿ ವಸಾಹತುಶಾಹಿಯನ್ನು ಎದುರಿಸುವುದು ಆಗಿರಲಿಲ್ಲ ಎಂಬುದನ್ನು ನಾವು ಗಮನಿಸಬೇಕಾಗುತ್ತದೆ. ಬೇಂದ್ರೆಯವರಿಗೆ ವ್ಯಕ್ತಿಯ ಹೃದಯ ಪರಿವರ್ತನೆಯಲ್ಲಿ ನಂಬಿಕೆಯಿತ್ತು. ಬದಲಿಗೆ ಈ ಸಾಮಾಜಿಕ ಹೋರಾಟಗಳಿಂದ ಸಮಾಜದ ಉದ್ಧಾರದಲ್ಲಿ ಅವರಿಗೆ ನಂಬಿಕೆಯಿರಲಿಲ್ಲ. ಆದ್ದರಿಂದಲೇ ಬೇಂದ್ರೆಯವರ ರಾಷ್ಟ್ರೀಯ ಕವನಗಳಲ್ಲಿ ರೋಷನ್ನು ನಾವು ಕಾಣಲು ಸಾಧ್ಯವಾಗುವುದಿಲ್ಲ. ಬೇಂದ್ರೆಯವರು ವಸಾಹತುಶಾಹಿಯ ಪ್ರಕ್ರಿಯೆಗೆ ಎದುರಾಗಿ ಸಂಕೇತ, ರೂಪಕಗಳನ್ನು ಇಟ್ಟುಕೊಂಡು ಸಜ್ಜಾದರು. ರಾಷ್ಟ್ರದ ಸುವರ್ಣ ಇತಿಹಾಸವನ್ನು ನೆನಪಿಸಿಕೊಳ್ಳುತ್ತಾ ರಾಷ್ಟ್ರವನ್ನು ದೇವಿಗೆ ತಾಯಿಗೆ ಹೋಲಿಸುತ್ತಾ ತಮ್ಮದೇ ಆದ ವಿಶಿಷ್ಟವಾದ ಕಾವ್ಯ ಭಾಷೆಯ ಮೂಲಕ ಜನರಲ್ಲಿ ರಾಷ್ಟ್ರೀಯ ಪ್ರಜ್ಞೆಯನ್ನು ಮೂಡಿಸುವಲ್ಲಿ ಬೇಂದ್ರೆಯವರು ಪ್ರಮುಖ ಪಾತ್ರವನ್ನು ವಹಿಸಿದರು.

## ಅಧ್ಯಾಯ ಐದು

## ಬೇಂದ್ರೆಯವರ ಕಾವ್ಯದಲ್ಲಿ ಕನ್ನಡತಾಯಿ

ಕರ್ನಾಟಕದ ಏಕೀಕರಣ ಚಳುವಳಿ ಭಾರತದಲ್ಲಿ ನಡೆದ ಸ್ವಾತಂತ್ರ್ಯ ಚಳುವಳಿಯಷ್ಟೇ ಚಾರಿತ್ರಿಕ ಘಟನೆಗಳಲ್ಲಿ ಪ್ರಮುಖವಾಗಿದೆ. ಭಾರತದಂತಹ ಬೃಹತ್ ರಾಷ್ಟ್ರವನ್ನು ಆಕ್ರಮಿಸಿದ ಬ್ರಿಟೀಷರು ತಮ್ಮ ಆಡಳಿತಕ್ಕೆ ಅನುಕೂಲವಾಗಲೆಂದು ಆಡಳಿತ ಘಟಕಗಳಾಗಿ ವಿಂಗಡಿಸಿದರು. ಹಾಗೆಯೇ ಬ್ರೀಟೀಷರು ಕರ್ನಾಟಕವನ್ನು ಐದು ಪ್ರಮುಖ ಆಡಳಿತ ಘಟಕವನ್ನಾಗಿ ವಿಂಗಡಿಸಿದ್ದರು. ಮುಂಬಯಿ ಕರ್ನಾಟಕ, ಮೈಸೂರು ಕರ್ನಾಟಕ, ಹೈದರಾಬಾದ್ ಕರ್ನಾಟಕ, ಮದರಾಸು ಕರ್ನಾಟಕ ಮತ್ತು ಕೊಡಗು ಎಂಬ ಐದು ಘಟಕಗಳನ್ನು ಬ್ರಿಟೀಷರು ಮಾಡಿ ಇಡೀ ಕರ್ನಾಟಕವನ್ನು ತುಂಡು ತುಂಡಾಗಿ ವಿಭಜಿಸಿದರು. ಇಂತಹ ಸಂದರ್ಭದಲ್ಲಿ ಕನ್ನಡಿಗರು ತಮ್ಮನ್ನು ತಾವು ಎಲ್ಲಿ ಗುರ್ತಿಸಿಕೊಳ್ಳಬೇಕೆಂಬ ಸಂದಿಗ್ಧತೆಯಲ್ಲಿ ಸಿಲುಕಿದರು. "ಈ ಹದಗೆಟ್ಟ ಪರಿಸ್ಥಿತಿಯನ್ನು ಬದಲಿಸಿ ನಾಡಿನ ಬೇರೆ ಬೇರೆ ತುಂಡುಗಳನ್ನು ಒಂದುಗೂಡಿಸಿ ಒಂದು ಪ್ರಕಾರದ ರಾಜಕೀಯ ಏಕತಂತ್ರತೆಯನ್ನು ತರುವುದೇ ಅರ್ಥಾತ್ ರಾಜಕೀಯ ದೃಷ್ಟಿಯಿಂದ ಒಂದೇ ಪ್ರಾಂತಿಕ ಆಡಳಿತಕ್ಕೆ ಒಳಪಡುವಂತೆ ವಿಕಲ ನಾಟಕವನ್ನು ಸಂಯೋಜಿಸುವುದೇ ಏಕೀಕರಣ"[1] ಎಂದು ಅಂದಿನ ಚಳುವಳಿಗಾರರೆ 'ಏಕೀಕರಣ' ಎಂಬ ಪರಿಕಲ್ಪನೆಯನ್ನು ಹುಟ್ಟು ಹಾಕಿದರು."

ಆದರೆ ಒಂದೇ ನಿಗದಿತವಾದ ಭೌಗೋಳಿಕ ಎಲ್ಲೆಯು ಏಕೀಕರಣದ ಮೂಲ ಸೂತ್ರವಲ್ಲ. ಅದು ಅನೇಕ ಪ್ರಮುಖ ಉದ್ದೇಶಗಳಲ್ಲಿ ಒಂದಾಗಿತ್ತು. ಏಕೀಕರಣಕ್ಕೆ ರಾಜಕೀಯ ಆಯಾಮವಲ್ಲದೆ ಸಾಂಸ್ಕೃತಿಕ ಆಯಾಮವು ಇದೆ. ಒಂದು ನಿರ್ದಿಷ್ಟವಾದ ಭೌಗೋಳಿಕ ಪರಿಸರದಲ್ಲಿ ವಾಸಿಸುವ ಜನರಿಗೆ ಒಂದು ನಿರ್ಧಿಷ್ಟ ಭಾಷೆಯ ಅಗತ್ಯವೂ ಇರುತ್ತದೆ. 1956 ಕ್ಕೆ ಮೊದಲು ಮನೆ ಮಾತು ಕನ್ನಡವಾಗಿದ್ದರೂ ವಿಂಗಡನೆಯಾದ ಪ್ರದೇಶಗಳಲ್ಲಿ ಮರಾಠಿ, ತಮಿಳು, ತೆಲಗು, ಬಂಗಾಳಿ, ಉರ್ದು, ಮಲೆಯಾಳಂ, ಗುಜರಾತಿ, ಇಂಗ್ಲೀಷ್ ಭಾಷೆಗಳು ಪ್ರಧಾನ ಪಾತ್ರವನ್ನು ವಹಿಸುತ್ತಿದ್ದವು. ಗ್ರಂಥಸ್ಥ ಭಾಷೆಯು ಕೂಡ ಒಂದೇ ರೀತಿಯಾಗಿರಲಿಲ್ಲ. ರಾಜಕೀಯವಾಗಿ ಕನ್ನಡಿಗರು ಆಡಳಿತದಲ್ಲಿ ಕನ್ನಡ ಭಾಷೆಯಲ್ಲಿ ವ್ಯವಹರಿಸುವುದು ಅಂದಿಗೆ ದುಸ್ತರವಾಗಿತ್ತು. ಒಂದೇ ರೂಪದಿಂದ ಕೂಡಿದ ಪ್ರಮಾಣಬದ್ಧ ಭಾಷೆಯ ಅನಿವಾರ್ಯತೆ ಉಂಟಾಗಿದ್ದೇ ಆ ಸಮಯದಲ್ಲಿ. ತಮ್ಮ ಭಾಷೆ ಮತ್ತು ಸಂಸ್ಕೃತಿಗಳ ಮೇಲೆ ಬೇರೆ ಯಾವುದೋ ಭಾಷೆ ಮತ್ತು ಸಂಸ್ಕೃತಿಗಳು ದಬ್ಬಾಳಿಕೆ ನಡೆಸುವುದು ಅಂದಿನ ಕನ್ನಡಿಗರಿಗೆ ಸಹನೀಯವಾಗಿ ಕಾಣಿಸಲಿಲ್ಲ. ಮುಂಬಯಿ, ಹೈದರಾಬಾದ್, ಮದ್ರಾಸ್ ನಗರಗಳಲ್ಲಿಯೇ ಆಡಳಿತ ಘಟಕಗಳಲ್ಲಿಯೇ ಕೇಂದ್ರಿಕೃತವಾಗಿತ್ತು. ಪ್ರಮುಖವಾದ ದಿನನಿತ್ಯದ ವಿಚಾರಗಳಿಗೆ ಕನ್ನಡಿಗರು ಬಹುದೂರ ಕ್ರಮಿಸಬೇಕಿತ್ತು.

ಇದರಿಂದ ಬಿಡುಗಡೆ ಹೊಂದಲು ಏಕೇಂದ್ರೀಕರಣದ ಆಡಳಿತವೇ ಸರಿಯಾದ ದಾರಿ ಎಂದು ಅಂದಿನ ಕನ್ನಡಿಗರು ಅರಿತರು. ಒಟ್ಟಾರೆ ಈ ಎಲ್ಲಾ ಕಾರಣಗಳು ಅಂದಿನ ಕನ್ನಡಿಗರು ತಾವು ರಾಜಕೀಯವಾಗಿ ಮತ್ತು ಸಾಂಸ್ಕೃತಿಕವಾಗಿ ಒಂದುಗೂಡಲೇಬೇಕೆಂಬ ಒತ್ತಡವನ್ನು ಸೃಷ್ಟಿಸಿದವು. ಈ ನಿಟ್ಟಿನಲ್ಲಿ ಏಕೀಕರಣ ಚಳುವಳಿಯು ಪ್ರಮುಖ ಪಾತ್ರವನ್ನು ವಹಿಸಿತು.

ಏಕೀಕರಣವು ಕನ್ನಡ–ಕನ್ನಡಿಗ–ಕರ್ನಾಟಕ ಈ ಪರಿಕಲ್ಪನೆಯಲ್ಲಿ ಕೆಲಸ ಮಾಡಬೇಕಿತ್ತು. ಹರಿದು ಹಂಚಿಹೋಗಿದ್ದ ಕರ್ನಾಟಕವನ್ನು ರಾಜಕೀಯವಾಗಿ ಭೌಗೋಳಿಕವಾಗಿ ಒಂದುಗೂಡಿಸುವುದಷ್ಟೇ ಏಕೀಕರಣದ ಕೆಲಸವಾಗಿರಲಿಲ್ಲ. ಕರ್ನಾಟಕವನ್ನು ಸಾಂಸ್ಕೃತಿಕವಾಗಿ ಭಾಷಿಕವಾಗಿಯೂ ಒಂದುಗೂಡಿಸುವ ಕೆಲಸವನ್ನು ಏಕೀಕರಣವು ಮಾಡಬೇಕಿತ್ತು. ರಾಷ್ಟ್ರೀಯತೆಗೆ ಹೇಗೆ ಅಂದಿನ ಸಾಹಿತ್ಯವು ಸ್ಪಂದಿಸಿತೋ ಹಾಗೆಯೇ ಈ ಏಕೀಕರಣ ಚಳುವಳಿಗೂ ಅಂದಿನ ಹೊಸಗನ್ನಡ ಸಾಹಿತ್ಯವು ಸಾಥ್ ನೀಡಿತು. ಏಕೀಕರಣವನ್ನು ಯಶಸ್ವಿಗೊಳಿಸುವಲ್ಲಿ ಚಳುವಳಿಗಳಷ್ಟೇ ಮಹತ್ವದ ಪಾತ್ರವನ್ನು ಅಂದಿನ ಸಾಹಿತಿಗಳು ವಹಿಸಿದರು.

ಮುಂಬಯಿ ಕರ್ನಾಟಕವು ಏಕೀಕರಣ ಚಳುವಳಿಯಲ್ಲಿ ಬಹು ಮುಖ್ಯವಾದ ಪಾತ್ರವನ್ನು ವಹಿಸುತ್ತದೆ. ಕ್ರಿ.ಶ. 1818 ರವರೆಗೂ ಈ ಭಾಗ ಪೇಶ್ವೆಗಳ ಆಳ್ವಿಕೆಗೆ ಒಳಪಟ್ಟಿತ್ತು. ಅವರ ನಂತರವೂ ಈ ಭಾಗವು ಮರಾಠಿ ಭಾಷೆಯ ಪ್ರಭಾವದಿಂದ ತಪ್ಪಿಸಿಕೊಳ್ಳಲಾಗಲಿಲ್ಲ. ಮರಾಠಿ ಭಾಷೆಗೆ ಇಲ್ಲಿ ಪ್ರಮುಖವಾದ ಸ್ಥಾನ ದೊರೆತ್ತದ್ದರಿಂದ ಕನ್ನಡವು ಮನೆ ಮಾತಾದ ಈ ಭಾಗಗಳಲ್ಲಿ ಕನ್ನಡವು ತನ್ನ ಪ್ರಖರತೆಯನ್ನು ಕಳೆದುಕೊಳ್ಳುವುದಕ್ಕೆ ಆರಂಭಿಸಿತು. "ದೇಶದಲ್ಲಿದ್ದ ಪ್ರತಿಕೂಲ ವಾತಾವರಣ ಕನ್ನಡ ನಾಡನ್ನೂ ಬಿಟ್ಟಿರಲಿಲ್ಲ. ಮಹಾರಾಷ್ಟ್ರಾಧಿಪತ್ಯಕ್ಕೊಳಗೊಂಡಿದ್ದ ಉತ್ತರ ಕರ್ನಾಟಕದ ಭಾಗವೆಲ್ಲ ಮರಾಠಿಯ ದಟ್ಟ ಛಾಯೆಗೆ ಒಳಗಾಗಿತ್ತು. ಬ್ರಿಟೀಷ್ ಆಳರಸರಿಗೆ ಈ ನಾಡಿನ ಭಾಷೆ ಮರಾಠಿಯೇ ಎಂಬ ಭ್ರಮೆ ಹಿಡಿದಿತ್ತು. ಸುಶಿಕ್ಷಿತರಲ್ಲಿ ಮರಾಠಿ ಬರೆಯುವುದು, ಮಾತಾಡುವುದು, ಗೌರವದ ವಿಷಯವೆನ್ನಿಸಿತ್ತು. ಕನ್ನಡ ಭಾಷೆ ಮತ್ತು ಸಂಸ್ಕೃತಿಗಳು ಅಜ್ಞಾತವಾಸಕ್ಕೆ ಸಂದಂತಾಗಿದ್ದವು. ಅದೊಂದು ಪರಭಾಷೆಯ ಮೋಹಪಾಶದಲ್ಲಿ ಸಿಲುಕಿಬಿದ್ದ ವಿಸ್ಮೃತಿಯ ಪರಿಸ್ಥಿತಿ"[2]

ಇಂತಹ ಕನ್ನಡ ಭಾಷೆಯ ದೀನ ಸ್ಥಿತಿಯಲ್ಲಿಯೇ ಕನ್ನಡ ಭಾಷೆ, ನಾಡಿನ ಬಗೆಗಿನ ಚಿಂತನೆಗಳಿಗೆ ಚಾಲನೆ ದೊರತಿತು. ಮುಂಬಯಿ ಕರ್ನಾಟಕದ ಕನ್ನಡಿಗನು ಮರಾಠಿ ಭಾಷೆಯ ಪ್ರಾಬಲ್ಯದಲ್ಲಿ ತತ್ತರಿಸಿ ಹೋಗಿದ್ದನು. ಆ ಕನ್ನಡಿಗನಿಗೆ ತನ್ನ ಭಾಷೆಯ ಬಗ್ಗೆ ಅಭಿಮಾನವೇ ಮಾಯವಾಗಿತ್ತು. ಇಂತಹ ಸಂದರ್ಭದಲ್ಲಿ ಬಂದ ಬಾಳಾಚಾರ್ಯ ಗೋಪಾಲಾಚಾರ್ಯ ಸಕ್ಕರಿ ಅಥವಾ ಶಾಂತಕವಿಗಳು ಕನ್ನಡಿಗರಲ್ಲಿ

ಮಾಯವಾಗಿದ್ದ ಅಭಿಮಾನವನ್ನು ಮತ್ತೆ ಮೂಡಿಸಲು ಬಹುವಾಗಿ ಶ್ರಮಿಸಿದರು. ಅರವತ್ತೈದು ಸ್ವತಂತ್ರ ಕೃತಿಗಳ ಮೂಲಕ ಕನ್ನಡ ನಾಡು–ನುಡಿಗಳು ಬಗ್ಗೆ ಕನ್ನಡಿಗರಿಗೆ ಅಭಿಮಾನದ ಜೊತೆಗೆ ಜಾಗೃತಿಯನ್ನು ಸಹ ಮೂಡಿಸಿದರು. 'ಇದು ಸಕ್ಕರಿಯಪ್ಪ ನಿಜವಾಗಿ ಇದು ಸಕ್ಕರಿ' ಎಂದು ಶಿಶುನಾಳ ಷರೀಪರು ಶಾಂತಕವಿಗಳ ಕನ್ನಡ ಪರ ಕೆಲಸವನ್ನು ಮೆಚ್ಚಿ ಹಾಡಿದರು. ಹೀಗೆ ಶಾಂತ ಕವಿಗಳು ಕನ್ನಡ ಏಕೀಕರಣಕ್ಕೆ ಅದ್ಭುತವಾದ ನಾಂದಿಯಾದರು.

ಮಂಬಯಿ ಕರ್ನಾಟಕದ ಭಾಗವಾಗಿದ್ದ ಧಾರವಾಡದಲ್ಲಿನ 'ಗೆಳೆಯರ ಗುಂಪು' ಎಂಬ ಸಾಂಸ್ಕೃತಿಕ ಸಂಘವು ಕನ್ನಡ ಸಾಹಿತ್ಯಕ್ಕೆ ಮತ್ತು ಏಕೀಕರಣಕ್ಕೆ ತನ್ನದೇ ಕೊಡುಗೆಯನ್ನು ನೀಡಿದೆ. ಬೇಂದ್ರೆ, ಮಧುರ ಚೆನ್ನ, ಸಿಂಪಿ ಲಿಂಗಣ್ಣ, ಶಂಬಾ ಜೋಶಿ ಮೊದಲಾದವರು ಮುಂಬಯಿ ಕರ್ನಾಟಕದಲ್ಲಿ ಈ ಗುಂಪನ್ನು ಕಟ್ಟಿದರು. ಮುಂಬಯಿ ಕರ್ನಾಟಕದ ಕನ್ನಡಿಗರು ಬೇರೆ ಭಾಷೆಯಾದ ಮರಾಠಿಯಿಂದಾಗಿ ಅವಮಾನವನ್ನು ಅನುಭವಿಸುತ್ತಿದ್ದರು. ಇಂಥ ಸಂದರ್ಭದಲ್ಲಿಯೇ ಕನ್ನಡಿಗರಲ್ಲಿ ಕನ್ನಡತನವನ್ನು ಶಾಂತ ಕವಿಗಳು ತುಂಬಿದರು. ಇವರ ಹಾದಿಯಲ್ಲಿಯೇ ಬೇಂದ್ರೆ ಮತ್ತು 'ಗೆಳೆಯರ ಗುಂಪು' ಸಾಗಿ ಬಂತು. ಮುಂಬಯಿ ಕರ್ನಾಟಕದ ಕನ್ನಡದ ಸ್ಥಿತಿಗೆ ಬೇಂದ್ರೆಯವರು ಐದು ಕಾರಣಗಳನ್ನು ನೀಡುತ್ತಾರೆ. "ಹೀಗಾಗಲಿಕ್ಕೆ ಅಂಥ ಕಾರಣಗಳೂ ಇರುವವು. ಎಷ್ಟೋ ದಿವಸಗಳಿಂದ ರಾಜಾಶ್ರಯವನ್ನು ಕಳೆದುಕೊಂಡು ತೊಳಲುತ್ತಿರುವ ಕರ್ನಾಟಕವು ಇಂಗ್ಲೀಷರ ಆಳ್ವಿಕೆಯಲ್ಲಿ ಭಿನ್ನ ಭಿನ್ನವಾಗಿದ್ದುದು ಮೊದಲನೆಯ ಕಾರಣವು. ಪೇಶ್ವೆಯರ ಆಳ್ವಿಕೆ ತೀರಿದ ಮೇಲೆ ಆರೇ ಅಮಲುದಾರರ ಆಳ್ವಿಕೆಯು ಎರಡನೆಯ ಕಾರಣವು : ರಾಜಾಶ್ರಯ ದೊರೆತ ಮೈಸೂರ ಕನ್ನಡವು ಯಾವುದೋ ಒಂದು ಕಾರಣದಿಂದ ನಮ್ಮ ಕೂಡ ಬಳಕೆ ಮಾಡದೆ ಇದ್ದದ್ದು ಮೂರನೆಯ ಕಾರಣ ಕಾಲ ಪ್ರತಿಕೂಲತೆಯು ನಾಲ್ಕನೆ ಕಾರಣ. ಮೊದಲನೆಯ ತರಗತಿಯ ಕರ್ತೃತ್ತ ಶಾಲಿಗಳು ಹುಟ್ಟದಿದ್ದದ್ದು ಐದನೆಯ ಕಾರಣ"[3]

ಈ ಸಂದರ್ಭದಲ್ಲಿಯೇ ಬೇಂದ್ರೆ ಮುಂಬಯಿ ಕರ್ನಾಟಕದ ಕನ್ನಡಿಗರಲ್ಲಿನ ಮರಾಠಿ ಭಾಷೆಯ ಮೋಹವನ್ನು ತಗ್ಗಿಸುವ ಕೆಲಸವನ್ನು ಮಾಡುತ್ತಿದ್ದರು. ಜೊತೆಗೆ ಆಗಿನ ಕರ್ನಾಟಕದ ಸ್ಥಿತಿಗತಿಗಳನ್ನು ಜನರಿಗೆ ತಮ್ಮ ಕಾವ್ಯದ ಮೂಲಕ ಜಾಗೃತಿ ಮೂಡಿಸುವ ಕೆಲಸವನ್ನು ಬೇಂದ್ರೆ ಮಾಡಿದರು. ಬೇಂದ್ರೆಯವರ ಮಾತೃಭಾಷೆ ಮರಾಠಿ ಆದರೂ ತಾಯಿ ಅಂಬಾಬಾಯಿಯವರ ಮೂಲಕ ಕನ್ನಡ ಭಾಷೆಯನ್ನು ಕಲಿತರು. ತಾಯಿ ಅಂಬಾಬಾಯಿಯವರಿಗೆ ಮರಾಠಿ ಮತ್ತು ಕನ್ನಡ ಎರಡೂ ಭಾಷೆಗಳು ಚೆನ್ನಾಗಿ ಬರುತ್ತಿತ್ತು. ಅವರು ಆ ಎರಡು ಭಾಷೆಗಳ ಭಕ್ತಿಗೀತೆಗಳನ್ನು ಹಾಡುತ್ತಿದ್ದರು. ಹೀಗೆ ಬೇಂದ್ರೆಯವರು ತೊದಲು ನುಡಿಯಾಗಿ ಕನ್ನಡ ಭಾಷೆಯನ್ನು ಕಲಿತು ನಂತರ ಕನ್ನಡ ಭಾಷೆಯನ್ನು ತಮ್ಮ ಕಾವ್ಯ ಭಾಷೆಯನ್ನಾಗಿ ದುಡಿಸಿಕೊಂಡರು. ಮುಂದೆ ಶಾಲಾ ಶಿಕ್ಷಕರಾಗಿ ಎಳೆಯ ಮನಸ್ಸುಗಳಿಗೆ ಕನ್ನಡದ ಅಮೃತವನ್ನು ಉಣಬಡಿಸಿದರು. ಚಿಕ್ಕಂದಿನಿಂದಲೇ ತಮ್ಮ ಮೇಲೆ ಪ್ರಭಾವವನ್ನುಂಟು ಮಾಡಿದ

ಕನ್ನಡ ಭಾಷೆಗೆ ತಮ್ಮ ಕೈಲಾದ ಸೇವೆಯನ್ನು ಮಾಡಬೇಕೆಂಬುದು ಬೇಂದ್ರೆಯವರ ಆಶಯವಾಗಿತ್ತು.

ಬೇಂದ್ರೆಯವರು ಕನ್ನಡ ಸೇವೆಗೆ ಕಂಕಣಬದ್ಧರಾಗಿದ್ದರು. ಅವರ ಈ ಸೇವಾ ತತ್ಪರತೆಯನ್ನು ಅವರ ಸ್ನೇಹಿತರಾದ ಶ್ರೀಧರ ಖಾನೋಳಕರರು ಈ ರೀತಿಯಾಗಿ ಗುರ್ತಿಸಿದ್ದಾರೆ. "ಶ್ರೀ ಬೇಂದ್ರೆಯವರು ಬಿ.ಎ. ದಲ್ಲಿರುವಾಗಲೇ ಅವರ ನಿಶ್ಚಯವಾಗಿತ್ತು. ಕರ್ನಾಟಕದ ಸೇವೆಗಾಗಿ ಏನಾದರೂ ಮಾಡಬೇಕು. ತನಗೆ ಯಾವುದು ಸಾಧ್ಯ? ಜ್ಞಾನದಾನ – ಶಿಕ್ಷಣ. ಆದ್ದರಿಂದ ಬಿ.ಎ ಆದ ಕೂಡಲೇ ಅವರು ಧಾರವಾಡಕ್ಕೆ ಹೋಗಿ ಮಾಸ್ತರರಾದರು. ಆಗಿನ ಕಾಲದಲ್ಲಿ ಅಂದರೆ 1917–18 ರಲ್ಲಿ ಸರಕಾರಿ ನೌಕರಿ ಹಿಡಿದಿದ್ದರೆ ಅವರಿಗೆ ಈಗ ಐನೂರರಷ್ಟು ಸಂಬಳವು ದೊರೆಯುವಷ್ಟು ಸೌಕರ್ಯ ಇತ್ತು. ಅವರಿಗೆ ಒಂದೇ ಒಂದು ಧ್ಯೇಯ. ಕರ್ನಾಟಕದ ಸಂಸ್ಕೃತಿಯ ಉನ್ನತಿ. ಆ ಧ್ಯೇಯವನ್ನು ಸಾಧಿಸುವುದು ಇನ್ನೆಲ್ಲಿಯೂ ಇಲ್ಲ. ಕರ್ನಾಟಕದಲ್ಲಿ ಅದೂ ಅಧ್ಯಾಪಕರಾಗಿ ಅಂದರೆ ಎಳೇ ಮಕ್ಕಳಿಗೆ ಕರ್ನಾಟಕಾಭಿಮಾನವನ್ನು ಕಲಿಸಿ ಅದನ್ನು ಬೇರೂರುವಂತೆ ಮಾಡುವುದು. ಆ ಅಭಿಮಾನವು ಒಣ ಜಂಭವಲ್ಲ. ಕರ್ನಾಟಕದಲ್ಲಿ ಹುಟ್ಟಿದ ವೀರರ, ವೇದಾಂತಿಗಳ ಚರಿತ್ರ ಮಹಾತ್ಮ್ಯವನ್ನು ತಿಳಿದು, ಕರ್ನಾಟಕದ ಕಲೆಯ ವೈಭವವನ್ನು ಕಂಡುಹಿಡಿದು, ಕನ್ನಡ ವಾಙ್ಮಯದಲ್ಲಿ ಅಡಕವಾಗಿರುವ ಉಚ್ಚ ಜೀವನ ತತ್ತ್ವಗಳನ್ನು ಕಲಿತು ನಡೆದು ತೋರಿಸಿ, "ಇದು ನೋಡಿರಿ ನಮ್ಮ ಕರ್ನಾಟಕ ಇಷ್ಟು ದೊಡ್ಡದು. ಇದರ ವಿಷಯವಾಗಿ ಅಭಿಮಾನ ತಾಳಿರಿ" ಎಂದು ಬೋಧಿಸುವದು. ಈ ಧ್ಯೇಯವನ್ನು ಸಾಧಿಸುವುದಕ್ಕೋಸ್ಕರ ಅವರು ಪಟ್ಟ ಕಷ್ಟಗಳು. ಅವರು ಮಾಡಿದ ಸಾಹಸ, ಅವರು ಕೈಗೊಂಡ ದಾರಿದ್ರ್ಯ, ಅವರು ಆಚರಿಸಿದ ದೀರ್ಘೋದ್ಯೋಗ – ಇವುಗಳನ್ನೆಲ್ಲ ನೋಡಿದರೆ, ಎದೆಯು ತಣ್ಣಗಾಗುವುದು ಭೇಟಿಯಾದವರಿಗೆಲ್ಲ 'ಕನ್ನಡ ಓದಿರಿ' ಇದೇ ಮಂತ್ರವನ್ನು ಎಷ್ಟೋ ದಿವಸ ಹೇಳುತ್ತ ನಡೆದ ಇವರನ್ನು ನೋಡಿ ಈ ಗೃಹಸ್ಥನಿಗೆ ಬೇಸರಿಕೆ ಹೇಗೆ ಬರುವುದಿಲ್ಲವೆಂದು ನನಗೆ ಆಶ್ಚರ್ಯವಾಗುತ್ತಿತ್ತು".[4]

ರಾಷ್ಟ್ರೀಯ ಚಳುವಳಿಯ ಜೊತೆ ಜೊತೆಗೆ ಏಕೀಕರಣ ಚಳುವಳಿಯು ಮೂಡಿ ಬಂದದ್ದರಿಂದ ಅದನ್ನು 'ಉಪ ರಾಷ್ಟ್ರೀಯತೆ' ಎಂದು ಕರೆಯುವುದರಲ್ಲಿ ಯಾವುದೇ ಅತಿಶಯೋಕ್ತಿ ಇಲ್ಲ. ರಾಷ್ಟ್ರೀಯತೆಯ ಚಳುವಳಿಗೆ ಅಂದಿನ ಕನ್ನಡ ಸಾಹಿತ್ಯವು ಸ್ಪಂದಿಸಿದ ರೀತಿಯಲ್ಲಿಯೇ ಈ ಏಕೀಕರಣಕ್ಕೂ ಅಂದಿನ ಕನ್ನಡ ಸಾಹಿತ್ಯವು ಸ್ಪಂದಿಸಿತು. ಅಂದಿನ ಕವಿಗಳು ಕನ್ನಡ ನಾಡು–ನುಡಿಯ ಬಗ್ಗೆ ಜನರಲ್ಲಿ ಜಾಗೃತಿ ಮೂಡಿಸುವ ಕೆಲಸವನ್ನು ತಮ್ಮ ಕಾವ್ಯದ ಮೂಲಕ ಮಾಡಿದರು. ಬಿ.ಎಂ.ಶ್ರೀ ನವೋದಯ ಕಾವ್ಯದ ಪ್ರವರ್ತಕರಾದಂತೆ ಶಾಂತ ಕವಿಗಳು ಈ ಏಕೀಕರಣದ ಮೂಲ ಪುರುಷರು. ಇವರ ಹಾದಿಯನ್ನೇ ಬೇಂದ್ರೆಯವರು ಅನುಸರಿಸಿ ಬಂದು ಏಕೀಕರಣಕ್ಕೆ ತಮ್ಮದೇ ಆದ ಕೊಡುಗೆ ನೀಡಿದ್ದಾರೆ.

ಬೇಂದ್ರೆಯವರು ತಮ್ಮ ಸಾಹಿತ್ಯ ಕೃಷಿಯನ್ನು ಆರಂಭಿಸಿದಾಗ ಕರ್ನಾಟಕವು ತುಂಡು ತುಂಡಾಗಿ ಹಂಚಿ ಹೋಗಿತ್ತು. ಜೊತೆಗೆ ಸ್ವಾತಂತ್ರ್ಯದ ಚಳುವಳಿಯ ಕಾವು ಏರಿತ್ತು. ಇಂತಹ ಸಂದರ್ಭದಲ್ಲಿ ರಾಷ್ಟ್ರೀಯತೆ ಮತ್ತು ಉಪರಾಷ್ಟ್ರೀಯತೆ ಎರಡಕ್ಕೂ ಬೇಂದ್ರೆಯವರು ತಮ್ಮ ಕಾವ್ಯದ ಮೂಲಕ ಸ್ಪಂದಿಸಿದರು. ಆ ಮೂಲಕ ಜನರಲ್ಲಿ ಜಾಗೃತಿಯನ್ನು, ಕನ್ನಡ ನಾಡು–ನುಡಿ ಬಗ್ಗೆ ಜನರಲ್ಲಿ ಅಭಿಮಾನವನ್ನು ಮೂಡಿಸಿದರು.

ಭಾರತವು 26 ರಾಜ್ಯಗಳನ್ನು ಒಳಗೊಂಡ ಬೃಹತ್ ರಾಷ್ಟ್ರ. ಭಾರತ ಎಂಬುದು ಭರತ ಮಾತೆಯಾದರೆ ಅಲ್ಲಿರುವ ರಾಜ್ಯಗಳು ಆಕೆ ಮಕ್ಕಳು. ಇಂತಹ ವಿಶಿಷ್ಟ ಕಲ್ಪನೆಯಲ್ಲಿ ಮೂಡಿ ಬಂದದ್ದೇ ಕನ್ನಡ ಮಾತೆ ಭರತಮಾತೆಯ ಮಗಳು ಎಂಬ ರೂಪ. ಈ ರೂಪವು ನಮ್ಮ ಕನ್ನಡ ಕವಿಗಳ ಸಾಮಾನ್ಯ ಲಕ್ಷಣವಾಗಿದೆ. ಬೇಂದ್ರೆಯವರು ಕೂಡ ಕನ್ನಡಮಾತೆಯನ್ನು ಭರತಮಾತೆಯ ಮಗಳೆಂದು ಕರೆದು ಏಕೀಕರಣವು ರಾಷ್ಟ್ರೀಯತೆಯ ಒಡಲಿನಿಂದ ಮೂಡಿಬಂದದ್ದು ಎಂಬುದನ್ನು ಸೂಚ್ಯವಾಗಿ ತಿಳಿಸಿದ್ದಾರೆ.

*"ಓರ್ವ ತಾಯಿಯ ತನ್ನ ಕೂಸಿರುವ ತೊಟ್ಟಿಲವ ಕೈಯಿಂದ ತೂಗುತಿಹಳೋ*

*ಪೂರ್ವ ಪಶ್ಚಿಮ ಘಟ್ಟದಲ್ಲಿ ಪಟ್ಟಿರುವಂಥ ನಾಡನ್ನೆ ನೂಗುತಿಹಳೋ"*

(ಕನ್ನಡದ ಕಂದವ್ವನ ಲಾಲಿ)

ಈಗಾಗಲೇ ಈ ಹಿಂದೆ ಉಲ್ಲೇಖಿಸಿದಂತೆ ಮುಂಬಯಿ ಕರ್ನಾಟಕದ ಕನ್ನಡಿಗರನ್ನು ಒಳಗೊಂಡಂತೆ ಹಂಚಿಹೋಗಿದ್ದ ಕರ್ನಾಟಕದಲ್ಲಿ ಕನ್ನಡಿಗರಿಗೆ ಭಾಷೆಯ ಬಗ್ಗೆ ಅಭಿಮಾನ ಮಾಯವಾಗಿತ್ತು. ಇದನ್ನು ಕಂಡ ಬೇಂದ್ರೆಯವರು ಅಭಿಮಾನವಿಲ್ಲದ ಕನ್ನಡಿಗರನ್ನು ರಾಜ್ಯಕ್ಕೆ ಒಂದು ದೊಡ್ಡ ಆತಂಕ ಎಂಬಂತೆ ಚಿತ್ರಿಸಿದ್ದಾರೆ. ಕನ್ನಡ ನಾಡು ನುಡಿಯ ಬಗ್ಗೆ ಅಭಿಮಾನ ಇದ್ದವರು ಆಸ್ತಿಕರು, ಅಭಿಮಾನ ಇಲ್ಲದವರು ನಾಸ್ತಿಕರು ಎಂಬ ಧೋರಣೆಯನ್ನು ಕವಿ ಬೇಂದ್ರೆಯವರು ತಳೆದಿದ್ದಾರೆ. ವೈಯುಕ್ತಿಕ ಆಸ್ತಿಯ ಆಸೆಯು ನಾಡಿನ ಜನರಲ್ಲಿ ಬಿರುಕನ್ನು ಮೂಡಿಸುವುದರಿಂದ Property Law ಆಸ್ತಿ ಸಂಪತ್ತಿನ ಕಾಯ್ದೆ ನಿಷೇಧಿಸಬೇಕೆಂಬ ಉದಾತ್ತ ದೋರಣೆಯನ್ನು ಕವಿ ಬೇಂದ್ರೆಯವರು ತಳೆದಿದ್ದಾರೆ. ವೈಯುಕ್ತಿಕ ಆಸ್ತಿ ಎಂಬುದು ಇಲ್ಲ ಆಸ್ತಿ ಎಂದರೆ ಅದು ಯಾರದ್ದೂ ಅಲ್ಲ ಇಡೀ ಕರ್ನಾಟಕಕ್ಕೆ ಸೇರಿದ್ದು ಎಂಬ ಭಾವನೆ ಜನರಿಗೆ ಬಂದಾಗ ಮಾತ್ರ ದೇಶದ ಕಲ್ಯಾಣವಾಗುತ್ತದೆ

ಎಂಬುದು ಬೇಂದ್ರೆಯವರ ಅಭಿಮತವಾಗಿದೆ. ಇದನ್ನು ಒಪ್ಪದೆ ಇರುವ ಅಭಿಮಾನ ಶೂನ್ಯರಾದ ಕನ್ನಡಿಗರು ಇದ್ದರೂ ಸತ್ತಂತೆ ಎಂಬ ಕಟು ನಿರ್ಧಾರಕ್ಕೆ ಬೇಂದ್ರೆಯವರು ಬರುತ್ತಾರೆ. ಒಟ್ಟಿನಲ್ಲಿ ಕನ್ನಡ ನಾಡು-ನುಡಿಯ ಬಗ್ಗೆ ಅಭಿಮಾನ ಶೂನ್ಯರಾದ ಕನ್ನಡಿಗರು ಬೇಂದ್ರೆಯವರು ಹೇಳುವಂತೆ ಸತ್ತ ಹೆಣವೇ ಸರಿ. ಇಂತಹ ಕಟು ಮಾತಿನ ಮೂಲಕ ಅಭಿಮಾನ ಶೂನ್ಯರಾದ ಕನ್ನಡಿಗರ ಮನಸ್ಸಿನಲ್ಲಿ ಅಭಿಮಾನವನ್ನು ತುಂಬುವ ಕೆಲಸವನ್ನು ಕವಿ ಬೇಂದ್ರೆ ಮಾಡಿದರು.

*"ಕನ್ನಡ ಮಾತೇ ಮಾತೆಯು ಕರ್ನಾಟಕ ಒಂದೇ*

*ಅದು ದೈವತ ಅದು ಜೀವಿತ ಒಪ್ಪಿಹೆವದುವೆಂದೇ*

*ನಮ್ಮದು ನಿಮ್ಮದು ಅವರದು ಈ ಆಸ್ತಿ ಪಾಸ್ತೀ*

*ನಾಡಿನ ತಾಯಿಗೆ ಸೇರಿದೆ. ಬೇರೆಯ ಮನೆ ನಾಸ್ತೀ*

*ಕನ್ನಡ ಕಾಯಕದಲ್ಲಿಲ್ಲವು ಕಮ್ಮೀ ಜಾಸ್ತೀ॥*

*ಇದನೊಪ್ಪದ ಹೆರವರು ಅವರಿದ್ದರು ಒಂದೇ ಇರದಿದ್ದರು ಒಂದೇ!"*[6]

**(ಒಂದೇ ಕರ್ನಾಟಕ)**

ಆಗಿನ ಕನ್ನಡ ನಾಡಿನ ಮತ್ತು ಕನ್ನಡಿಗರ ಸ್ಥಿತಿಯನ್ನು ಬಹು ಸಮರ್ಥವಾಗಿ ಬೇಂದ್ರೆಯವರ 'ಕನಸಿನೊಳಗೊಂದು ಕಣಸು' ಎಂಬ ಕವನವು ಹಿಡಿದಿಟ್ಟಿರುತ್ತದೆ. ಕನಸಿನಲ್ಲಿ ಕನ್ನಡ ತಾಯಿಯ ಜೊತೆ ಕನ್ನಡಿಗನು ಮಾಡುವ ಸಂವಾದದ ಮೂಲಕ ಕೆಲವೊಂದು ಸತ್ಯಗಳನ್ನು ಈ ಕವನವು ಬಿಚ್ಚಿಡುತ್ತದೆ. ವೈಭವದಿಂದ ಈ ಹಿಂದೆ ಮೆರೆದ ಕನ್ನಡ ತಾಯಿ ಈಗ ತನ್ನದು ಎಂದು ಹೇಳಿಕೊಳ್ಳುವಂತಹ ನೆಲವು ಆಕೆಗಿಲ್ಲ. ಅವಳ ನೆಲವು ಇಂದು ಹಂಚಿಹೋಗಿದೆ. ಆದರೆ ಅದನ್ನು ಒಂದುಗೂಡಿಸಬೇಕೆಂಬ ಕೆಚ್ಚು ಆ ಕನ್ನಡಿಗರಿಗಿಲ್ಲ. ಇದನ್ನು ಕಂಡ ಕನ್ನಡತಾಯಿಗೆ ನೋವಾಗಿದೆ. ಕನ್ನಡಿಗರಲ್ಲಿ ಕೆಚ್ಚನ್ನು ತುಂಬುವ ಕೆಲಸವನ್ನು ಕನ್ನಡ ತಾಯಿ ಇಲ್ಲಿ ಮಾಡುತ್ತಿದ್ದಾಳೆ. ಹೀಗೆ ಕೆಚ್ಚನ್ನು ತುಂಬಿಕೊಂಡು ಆ ಮೂಲಕ ನಾಡನ್ನು ಕಟ್ಟುವ ಶಕ್ತಿಯನ್ನು ಕನ್ನಡಿಗರು ಬೆಳಸಿಕೊಳ್ಳಬೇಕೆಂಬುದು ಕವಿ ಬೇಂದ್ರೆಯ ಆಶಯವಾಗಿದೆ.

*"ಚಂಡಿ ಚಾಮುಂಡಿ ಪೇಳ್ ಬೇಕಾದುದೇನು?"*

*"ಗಂಡಸಾದರೆ ನಿನ್ನ ಬಲಿ ಕೊಡುವೆಯೇನು?"*

*ಮನವು ನಡುಗಿತು ತನುವು ನವಿರಿಗೊಳಗಾಯ್ತು*

*ನೆನವು ನುಗ್ಗಿತು – ಹೊರಗೆ ಕಡೆ ಬೆಳಗಾಯ್ತು"*[8]

*(ಕನಸಿನೊಳಗೊಂದು ಕಣಸು)*

ಕರ್ನಾಟಕದ ಭೂ ಭಾಗವು ಹರಿದು ಹಂಚಿ ಹೋಗಿರುವಂತೆಯೇ ಇಲ್ಲಿನ ಕನ್ನಡಿಗರು ಸಹ ಭಾಗಗಳಂತೆ ಹಂಚಿಹೋಗಿದ್ದಾರೆ. ಕನ್ನಡಿಗರು ಯಾವುದೇ ಭೂ ಭಾಗದಲ್ಲಿ ಹಂಚಿಹೋಗಿದ್ದರೂ ನಾವು ಕನ್ನಡಿಗರು, ಭಾರತೀಯರು ಎಂಬ ಭಾವನೆ ಬತ್ತದೇ ಇರಬೇಕು. ಈ ಭಾವನೆ ಇಲ್ಲದೆ ಹೋದರೆ ಏಕತೆಗೆ ಭಂಗ ಬರುತ್ತದೆ. ಭತ್ತದ ಮೇಲಿನ ತುಷವು ಬೀಜವನ್ನು ಕಾಪಾಡುವಂತೆ ಕರ್ನಾಟಕವು ಕವಚದಂತೆ ಇಲ್ಲಿನ ಐಕ್ಯ ಭಾವವನ್ನು, ಕನ್ನಡವನ್ನು ಕಾಪಾಡುತ್ತದೆ ಎಂಬ ಕವಿ ಬೇಂದ್ರೆ ಭಾವವು ಕನ್ನಡಿಗರ ಮನಸ್ಸಿನಲ್ಲಿ ಐಕ್ಯತೆಯನ್ನು ಕಳೆದುಕೊಳ್ಳದಿರಲಿ ಎಂದು ಹಾರೈಸುವಂತಿದೆ.

*"ಭಾರತೀಯ ಜೋಡಿ, ಕನ್ನಡದ ಮೋಡಿ, ಭೂದೇವಿ ಮಾಡಿ ಎರಕವನೆ ಹೊಯ್ದರೆ*

*ರಸದೊಳಗೆ ರಸವು ಹಲ ಬಣ್ಣ ಹೊಸವು ಬೀಜವನೆ ತುಷಮ ತಾಯಾಗಿ ಕಾಯ್ದರೆ"*[8]

(ನನ್ನದು ಈ ಕನ್ನಡ ನಾಡು)

ಒಂದು ನಾಡಿಗೆ ಗಡಿಗಳು ತುಂಬಾ ಮುಖ್ಯ. ಬೇರೆ ನಾಡಿನವರು ಇಲ್ಲಿ ಬಂದು ವಾಸಿಸುವುದಕ್ಕೆ ಅವಕಾಶ ನೀಡುವುದು ಈ ನಾಡಿನ ಜನರ ವಿಶಾಲ ಮನೋಭಾವವನ್ನು ತೋರಿಸುತ್ತದೆ. ಆದರೆ ಬೇರೆ ನಾಡಿನವರು ಈ ನಮ್ಮ ನಾಡಿನ ಭೂಮಿಯನ್ನು ಒತ್ತರಿಸಿಕೊಂಡು ಬಂದಾಗ ವಿಶಾಲ ಮನೋಭಾವವನ್ನು ಬಿಟ್ಟು ನಮ್ಮ ಭೂಮಿಗಾಗಿ ನಾವು ಹೋರಾಟ ಮಾಡಲೇಬೇಕಾಗುತ್ತದೆ. ಈ ನಿಟ್ಟಿನಲ್ಲಿ ಗಡಿಗಳು ತುಂಬಾ ಮುಖ್ಯವಾಗುತ್ತದೆ. ಈ ಏಕೀಕರಣ ಸಂದರ್ಭದಲ್ಲಿ ಕವಿ ಬೇಂದ್ರೆ ತಮ್ಮ ಕಾವ್ಯದ ಮೂಲಕ ಕನ್ನಡ ತಾಯಿಯ ಭೌಗೋಳಿಕ ಗಡಿಗಳನ್ನು ಸೂಚಿಸುತ್ತಿದ್ದಾರೆ.

*"ತಮಿಳರಣ್ಣಾ ತೆಲುಗ ತಮ್ಮಾ ಕೇರಳದ ಕಿರಿಸೋದರಾ*

*ಆರದಿರಲೈ ಆದರಾ*

*ಮಹಾರಾಷ್ಟ್ರ ನಿರು ನೀನುತ್ತರಾ*

*ನೆರೆಹೊರಿಕೆಯಾಗಲಿ ಹತ್ತಿರಾ*

*ಬೆಳೆಸೋಣ ಇಬ್ಬರ ಎತ್ತರಾ"*[9]

(ನೀವಾರಲಾ)

ಬಂಗಾಳಿ ಕವಿ ಬಂಕಿಮಚಂದ್ರರ 'ವಂದೇ ಮಾತರಂ' ಗೀತೆಯು ಅಂದಿನ ಭಾರತದ ಎಲ್ಲಾ ಭಾಷೆಯ ಸಾಹಿತ್ಯದ ಮೇಲೂ ಪ್ರಭಾವ ಬೀರಿತು. ಭಾರತವನ್ನು ತಾಯಿಯಾಗಿ ನೋಡುವ ನೋಟಕ್ರಮವು ಬಹುಶಃ ಬಂಕಿಮಚಂದ್ರರಿಂದಲೇ ಆರಂಭವಾಗಿರಬೇಕು. ಕನ್ನಡದಲ್ಲೂ ಈ ರೀತಿಯ ನೋಟಕ್ರಮ ಆರಂಭವಾಯಿತು.

ಶಾಂತ ಕವಿಗಳು, ಬೇಂದ್ರೆ, ಕುವೆಂಪು ಮೊದಲಾದ ಕವಿಗಳು ಕರ್ನಾಟಕವನ್ನು ಮಾತೆಯಾಗಿ ನೋಡಿದರು. ಬೇಂದ್ರೆ ಮತ್ತು ಕುವೆಂಪು ಕರ್ನಾಟಕವನ್ನು ಭಾರತಮಾತೆಯ ಮಗಳಾಗಿಯೇ ನೋಡಿದರು. ಬೇಂದ್ರೆಯವರ ಕನ್ನಡ ಮಾತೆ ಪ್ರೀತಿಯನ್ನು ತೋರುವ, ಆಶ್ರಯವನ್ನು ನೀಡುವಂತಹ ಸುಕೋಮಲ ಭಾವಗಳ ಒಡತಿ. ಆಕೆ ಸೌಮ್ಯ ರೂಪದಾಯಿನಿ. ಆಕೆ ಸುಕೋಮಲ ಭಾವವನ್ನು ಹೊಂದಿದಂತೆಯೇ ಕನ್ನಡಿಗರ ಕಿಚ್ಚನ್ನು ಉದ್ದೀಪಿಸಲು ಬಲಿ ಕೇಳುವ ಮಾರಿಯೂ ಆಗುತ್ತಾಳೆ. ಕುವೆಂಪುವಿನಲ್ಲಿ ಕನ್ನಡ ಮಾತೆ 'ಕ್ರಾಂತಿ ಕಾಳಿಯೂ' ಆಗುತ್ತಾಳೆ. ಕುವೆಂಪು ರಾಷ್ಟ್ರೀಯತೆ ಮತ್ತು ಉಪರಾಷ್ಟ್ರೀಯತೆ ಈ ಎರಡಕ್ಕೂ ಬಹಳ ತೀವ್ರವಾಗಿಯೇ ಸ್ಪಂದಿಸುತ್ತಾರೆ. ಅಂದಿನ ಮೈಸೂರು ಸರ್ಕಾರ ಕುವೆಂಪುವಿನ ನಾಡು-ನುಡಿ ಚಿಂತನೆಗಳು ಕನ್ನಡಿಗರನ್ನು ಉದ್ದೀಪಿಸುತ್ತದೆ ಎನ್ನುವುದಕ್ಕಾಗಿಯೇ ಕುವೆಂಪುರವರಿಗೆ ನೋಟೀಸನ್ನು ಜಾರಿ ಮಾಡುತ್ತದೆ. ಕುವೆಂಪುರವರ ಭಾಷೆಗೆನೇ ಆ ತೀವ್ರವಾದ ಗಡಸುತನವಿದೆ. ಅವರ ಭಾಷೆಯು ಸಲಾಕೆಯಷ್ಟು ಮೊನಚಾಗಿರುತ್ತದೆ. ಆದ್ದರಿಂದಲೇ ಕುವೆಂಪುರವರು ರಾಷ್ಟ್ರೀಯತೆ ಮತ್ತು ಉಪರಾಷ್ಟ್ರೀಯತೆಗೆ ಕೊಟ್ಟ ಕೊಡುಗೆಯನ್ನು ನಾವು ಇಂದಿಗೂ ಸ್ಮರಿಸುತ್ತೇವೆ.

ಬೇಂದ್ರೆಯವರ ಕಾವ್ಯ ಭಾಷೆಯು ಜನರಲ್ಲಿ ಅರಿಕೆ ಮಾಡಿಕೊಳ್ಳುವಂತಿದ್ದರೆ ಕುವೆಂಪುರವರ ಕಾವ್ಯ ಭಾಷೆಯು ಜನರಿಗೆ ಹೀಗೆ ಮಾಡುವಂತೆ ಪರೋಕ್ಷವಾಗಿ ಆಜ್ಞೆ ಮಾಡುವಂತಿರುತ್ತದೆ. ಹರಿ, ಶಿವರಂತಹ ದೇವತೆಗಳೇ ಕನ್ನಡದಲ್ಲಿ ಮಾತನಾಡುವಾಗ ಈ ಕರ್ನಾಟಕದಲ್ಲಿ ಹುಟ್ಟಿದವರು ಕನ್ನಡದಲ್ಲಿ ಮಾತನಾಡುವುದಕ್ಕೆ ಹಿಂಜರಿಯಬಾರದು. ಕನ್ನಡದಲ್ಲಿ ಮಾತನಾಡುವ ಮೂಲಕ ಕನ್ನಡ ತಾಯಿಯ ಸೇವೆ ಮಾಡಬೇಕೆಂದು ಕುವೆಂಪುರವರು ಕನ್ನಡಿಗರಿಗೆ ಆಜ್ಞಾಪಿಸುತ್ತಿದ್ದಾರೆ.

***"ಬಾಳುವುದೇತಕೆ? ನುಡಿ ಎಲೆ ಜೀವ;***

***ಸಿರಿಗನ್ನಡದಲಿ ಕವಿತೆ ಹಾಡೆ***

***ಸಿರಿಗನ್ನಡದೇಳಿಗೆಯನು ನೋಡೆ***

***ಕನ್ನಡ ತಾಯಿಯ ಸೇವೆಯ ಮಾಡೆ"*** [10]

(ಕನ್ನಡ)

ಆದರೂ ನಮ್ಮ ಕನ್ನಡ ಕವಿಗಳು 'ತಾಯಿ' ಎಂಬ ಪ್ರತಿಮೆಯನ್ನು ಬಳಸಲು ಕಾರಣವೇನು ಎಂಬ ಪ್ರಶ್ನೆಯು ಮನಸ್ಸಿನಲ್ಲಿ ಕಾಡುತ್ತದೆ. ಈ ಪ್ರಶ್ನೆಗೆ ಸತ್ಯನಾಥ್‌ರವರು

ಈ ಉತ್ತರವನ್ನು ನೀಡುತ್ತಾರೆ. 'ಯಾವ ವಿವರಗಳನ್ನು ಬ್ರಿಟೀಷರು ಕೇವಲ ಭೌಗೋಳಿಕವಾದ ಸಂಗತಿಗಳಿಗೆ, ಅಂಶಗಳಿಗೆ, ಭೂಪಟದ ಮೇಲೆ ಕಾಣಬಹುದಾದ ವಿವರಗಳ ಮಟ್ಟಕ್ಕೆ ಇಳಿಸಿದ್ದರೋ ಅದನ್ನು ಮತ್ತೆ ಎಸ್ಟಾಬ್ಲಿಷ್ ಮಾಡಬೇಕಾದರೆ ಇನ್ನೊಂದು ತುದಿಗೆ ಹೋಗಿ ಇದನ್ನು ತಾಯಿ ಎಂದು ಕರೆಯಬೇಕಾದ ಅವಶ್ಯಕತೆ ಬಂತು" ॥

ಒಟ್ಟಾರೆ ಬೇಂದ್ರೆಯವರ ರಾಷ್ಟ್ರೀಯತೆ ಮತ್ತು ಉಪರಾಷ್ಟ್ರೀಯತೆಯನ್ನು ಕುರಿತಾದ ಕವನಗಳನ್ನು ನೋಡಿದರೆ ಅವು ಸಾಹಿತ್ಯದ ಗಂಭೀರ ಅಧ್ಯಯನಕ್ಕೆ ಯೋಗ್ಯವಾದವುಗಳಲ್ಲ. ಅವು ಕವಿ ಬೇಂದ್ರೆಯವರ ಮನೋಭಾವವನ್ನು ವ್ಯಕ್ತಪಡಿಸುವಂತಹದ್ದಲ್ಲ. ಬದಲಿಗೆ ಅಂದಿನ ಸಮಾಜದ ಸಂದರ್ಭ ಮತ್ತು ಪರಿಸ್ಥಿತಿಗೆ ಅನುಗುಣವಾಗಿ ಸ್ಪಂದಿಸುವ ಕಾವ್ಯಗಳಿವು. ಜನರಲ್ಲಿ ಜಾಗೃತಿ ಮೂಡಿಸುವಂತಹ ಕಾವ್ಯಗಳು ಮಾತ್ರ ಇವಾಗಿದೆ. ಕಾವ್ಯದ ಗಂಭೀರ ಓದುವಿಕೆಗೆ ಈ ಕವನಗಳು ಸಿಕ್ಕದೆ ಹೋದರೂ ಸಹ ಅಂದಿನ ಜನರನ್ನು ಚಳುವಳಿಗೆ ತಯಾರು ಮಾಡುವ ಕೆಲಸವನ್ನು ಬೇಂದ್ರೆಯ ಕಾವ್ಯವು ಮಾಡಿತು.

# ಅಧ್ಯಾಯ ಆರು

## ಬೇಂದ್ರೆಯವರ ಕಾವ್ಯದಲ್ಲಿ ಶ್ರೀಮಾತೆ

### ಮೀರಾ–ಅರವಿಂದಾಶ್ರಮ– ಶ್ರೀಮಾತಾ

ಅದೊಂದು ಪ್ಯಾರಿಸ್ ಆಗರ್ಭ ಶ್ರೀಮಂತರ ಮನೆ. ಆ ಮನೆಯ ಐದು ವರ್ಷದ ಹುಡುಗಿ ತನ್ನ ಚಿಕ್ಕ ಕುರ್ಚಿಯಲ್ಲಿ ಗಂಭೀರ ವದನೆಯಾಗಿ ಕುಳಿತಿದ್ದಾಳೆ. ಆವಳ ಮನಸ್ಸು ಯಾವುದನ್ನೋ ಗಾಢವಾಗಿ ಚಿಂತಿಸುತ್ತಿರುವಂತೆ ಕಾಣುತ್ತಿದೆ. ಇದನ್ನು ಗಮನಿಸಿದ ಆಕೆಯ ತಾಯಿ "ಏನೆ ಅದು, ಲೋಕದ ಹೊರೆಯನ್ನೆ ಹೊತ್ತವಳಂತೆ ಮುಖ ಜೋಲುಬಿಟ್ಟು ಕುಳಿತಿದ್ದೀ? ಎಂದು ಪ್ರಶ್ನಿಸುತ್ತಾರೆ. ಆಗ ಆ ಪುಟ್ಟ ಹುಡುಗಿ ;ಹೌದು ಲೋಕ ಶೋಕದ ಹೊರೆಯನ್ನು ಹೊತ್ತಿದ್ದೇನೆ' ಎಂದು ಉತ್ತರಿಸುತ್ತಾಳೆ. ಹೀಗೆ ಈ ಲೋಕ ಒಂದು ಶೋಕದ ಮನೆ ಎಂದು ಉತ್ತರ ಕೊಟ್ಟ ಐದು ವರ್ಷದ ಈ ಹುಡುಗಿಯೇ ಮೀರಾ.

ಈಕೆ 1878 ಫೆಬ್ರವರಿ 21 ರಲ್ಲಿ ಪ್ಯಾರಿಸ್ ನಲ್ಲಿ ಹುಟ್ಟಿದಳು ತಂದೆ ಮಾರಿಸ್ ಅಲ್ಫಾಸ್ಸ್. ತಾಯಿ ಮಾತಿಲ್ದೆ ಅಲ್ಫಾಸ್ಸ್. ಈಕೆಗೊಬ್ಬ ಅಣ್ಣ ಕೂಡ ಇದ್ದನು. ಅವನ ಹೆಸರು ಮ್ಯಾಟ್ಟಿಯೊ, ಮಕ್ಕಳಿಗೆ ಹೆತ್ತವರ ರೂಪ, ಬಣ್ಣಗಳು ಹೇಗೆ ಬಳುವಳಿಯಾಗಿ ಬರುತ್ತದೆಯೋ ಹಾಗೆಯೇ ಅವರ ಗುಣಗಳು ಕೂಡ ಬಳುವಳಿಯಾಗಿ ಬರುತ್ತದೆ. ಬೇರೆ ಮಕ್ಕಳಂತೆ ಮೀರಾಳಿಗೂ ಕೂಡ ಅವರ ತಂದೆ, ತಾಯಿಯಿಂದ ಕೆಲವೊಂದು ಒಳ್ಳೆಯ ಗುಣಗಳು ಬಳುವಳಿಯಾಗಿ ಬಂದು ಮೀರಾಳಿಗೆ ಒಂದು ಒಳ್ಳೆಯ ವ್ಯಕ್ತಿತ್ವವನ್ನು ಕಲ್ಪಿಸಿಕೊಟ್ಟವು.

ಮೀರಾಳ ತಾಯಿ ಮಾತಿಲ್ದೆ ಬಹಳ ಕಟುವಾದ ನಿರ್ಧಾರಕ ಶಕ್ತಿಯನ್ನು ಹೊಂದಿದವಳಾಗಿದ್ದಳು. ತನ್ನ ತಾಯಿಯ ಬಗ್ಗೆ ಶ್ರೀಮಾತೆ ಈ ರಿತಿಯಾಗಿ ಹೇಳುತ್ತಾರೆ. "ನನ್ನ ಮಕ್ಕಳು ಜಗತ್ತಿನಲ್ಲೆಲ್ಲ ಅತ್ಯಂತ ಶ್ರೇಷ್ಠರಾಗಬೇಕು. ಇದು ಅವಳ ಆಸೆಯೆ ಮಾತ್ರವಲ್ಲ. ಅದು ಅವಳ ಇಚ್ಛೆ. ಅದೆಂಥ ಇಚ್ಛಾಶಕ್ತಿ! ನನ್ನ ತಾಯಿಗೆ ಪ್ರಬಲವಾದ ಇಚ್ಛಾಶಕ್ತಿ ಇತ್ತು – ಉಕ್ಕಿನ ಸಲಾಕೆಯಂತೆ ಏನನ್ನಾದರೂ ನಿಶ್ಚಯಿಸಿದರೆ ಅದೇ ನಿಶ್ಚಯ ಯಾರಾದರೂ ಸಾವಿನ ದವಡೆಯಲ್ಲಿ ಸಿಕ್ಕಿದರೂ ಸರಿಯೆ. ತನ್ನ ನಿರ್ಧಾರವನ್ನೇನೂ ಬದಲಿಸುವವಳಲ್ಲ. ನನ್ನ ಮಕ್ಕಳು ಜಗತ್ತಿನಲ್ಲಿ ಶ್ರೇಷ್ಠರಾಗಬೇಕೆಂದು ನಿರ್ಧರಿಸಿ ಬಿಟ್ಟಳು ಆಯಿತು"[1] ಇಂತಹ ನಿರ್ಧಾರದಲ್ಲಿನ ಕಠಿಣತೆಯು ಮೀರಾಳಿಗೆ ಬಳುವಳಿಯಾಗಿ ಹರಿದು ಬಂದಿತು. ಮೀರಾಳ ಕಟು ನಿರ್ಧಾರದಿಂದಲೇ ಪಾಂಡಿಚೆರಿಯಲ್ಲಿ ಅರವಿಂದಾಶ್ರಮವನ್ನು ಒಂದು ವ್ಯವಸ್ಥಿತ ಮಟ್ಟದಲ್ಲಿ ಸ್ಥಾಪಿಸಲು ಸಾಧ್ಯವಾಯಿತು.

ತಂದೆ ಮಾರಿಸ್ ಅಲ್ಫಾಸ್ಸಾ ಸಮಸ್ಯಾತ್ಮಕ ಲೆಕ್ಕಾವನ್ನು ಬಿಡಿಸುವುದರಲ್ಲಿ ನಿಷ್ಣಾತರಾಗಿದ್ದರು. ಆತನಿಗೆ ಜರ್ಮನ್, ಇಂಗ್ಲೀಷ್, ಇಟಾಲಿಯನ್ ಮತ್ತು ಟರ್ಕಿಷ್ ಭಾಷೆಗಳ ಪರಿಚಯವಿತ್ತು. ಕೇವಲ ಬುದ್ಧಿಯಲ್ಲಿ ಮಾತ್ರವಲ್ಲದೆ ದೈಹಿಕ ಸಾಮರ್ಥ್ಯದಲ್ಲೂ ಕೂಡ ಬಲಶಾಲಿಗಳಾಗಿದ್ದರು. ಆತ ಒಳ್ಳೆಯ ಕುದುರೆ ಸವಾರ. ಕುದುರೆಯನ್ನು ಪಳಗಿಸುವುದರಲ್ಲಿಯೂ ಆತ ಪರಿಣತನಾಗಿದ್ದನು. ಕುದುರೆಯ ಬಲಶಾಲಿ ಕಾಲುಗಳನ್ನು ಬಗ್ಗಿಸಿ ಕುದುರೆ ನೆಲದ ಮೇಲೆ ಕುಳಿತುಕೊಳ್ಳುವಂತೆ ಮಾಡುತ್ತಿದ್ದರು. ಇಂತಹ ಬಲಶಾಲಿಯಾದ ದೈಹಿಕ ಸಾಮರ್ಥ್ಯವನ್ನು ಮೀರಾಳ ತಂದೆ ಮಾರಿಸ್ ಅಲ್ಫಾಸ್ಸಾ ಹೊಂದಿದ್ದತು. ತಂದೆಯಂತೆ ಮೀರಾಳು ಬುದ್ಧಿಶಕ್ತಿಯಲ್ಲಿಯೂ ಹಾಗೆಯೇ ದೈಹಿಕ ಶಕ್ತಿಯಲ್ಲಿಯೂ ಪರಿಣಿತಳಾಗಿದ್ದಳು. ಶಾಲೆಯಲ್ಲಿ ಒಬ್ಬ ಧಾಂಡಿಗ ವಿದ್ಯಾರ್ಥಿ ಮೀರಾಳ ಸಹಪಾಠಿಯಾಗಿದ್ದ. ಆತ ಹುಡುಗಿಯರಿಗೆ ಅನಾವಶ್ಯಕವಾಗಿ ತೊಂದರೆ ಕೊಡುತ್ತಿದ್ದ. ಒಮ್ಮೆ ಆತ ಮೀರಾಳಿಗೂ ತೊಂದರೆ ಕೊಟ್ಟನು. ಅವನ ಈ ವರ್ತನೆ ಮೀರಾಳಿಗೆ ಕೋಪವನ್ನು ಬರಿಸಿತು. ಆಗ ಆಕೆ ಹಿಂದು ಮುಂದು ನೋಡದೆ ಆ ಧಾಂಡಿಗನನ್ನು ಎತ್ತಿ ದೂರಕ್ಕೆ ಬಿಸಾಕಿದ್ದಳು. ನಂತರ ಮುಂದೆಂದೂ ಆ ಧಾಂಡಿಗ ಯಾವ ಹುಡುಗಿಯ ಸಹವಾಸಕ್ಕೂ ಹೋಗಲಿಲ್ಲ. ಈ ಘಟನೆ ಮೀರಾ ಬುದ್ಧಿಶಕ್ತಿಯಲ್ಲಿಯೂ ಮಾತ್ರವಲ್ಲದೆ ದೈಹಿಕವಾಗಿಯೂ ಆಕೆ ಎಷ್ಟು ಸಮರ್ಥಳು ಎಂಬುದನ್ನು ತೋರಿಸುತ್ತದೆ. ಈಕೆಯ ದೈಹಿಕ ಸಾಮರ್ಥ್ಯದ ಹಿಂದೆ ಅವರ ತಂದೆಯ ದೈಹಿಕ ಸಾಮರ್ಥ್ಯದ ನೆರಳು ಇಲ್ಲದ್ದಿಲ್ಲ.

ಈ ರೀತಿಯಾಗಿ ಮೀರಾ ತನ್ನ ತಂದೆ, ತಾಯಿಯ ಮೂಲಕ ಟರ್ಕಿಸ್ ಮತ್ತು ಈಜಿಪ್ಟ್‌ನ ಸಂಸ್ಕೃತಿಯ ಜೊತೆಗೆ ತಾನು ಹುಟ್ಟಿದ ಫ್ರಾನ್ಸ್ ದೇಶದ ಉದಾರ ದೃಷ್ಟಿಯನ್ನು ಪಡೆದಳು. ಈ ಮೂರು ವಿಭಿನ್ನ ಸಂಸ್ಕೃತಿಗಳು ಮೀರಾಳನ್ನು ಒಂದು ವಿಶಿಷ್ಟ ಪ್ರಪಂಚಕ್ಕೆ ಕರೆದೊಯ್ಯಲು ಸಹಾಯ ಮಾಡಿತು.

ಮೀರಾ ಸಾಮಾನ್ಯವಾದ ಮಗುವಾಗಿರಲಿಲ್ಲ. ಟೆನ್ನಿಸ್, ಚಿತ್ರಕಲೆ, ಸಂಗೀತ, ಕವಿತಾರಚನೆ ಹೀಗೆ ಎಲ್ಲದರಲ್ಲೂ ಆಕೆ ಪರಿಣತಿಯನ್ನು ಸಾಧಿಸಿದ್ದಳು. ಜೊತೆಗೆ ಇವೆಲ್ಲರಕ್ಕೂ ಮುಕುಟ ಪ್ರಾಯದಂತೆ ಆಧ್ಯಾತ್ಮಿಕತೆಯನ್ನು ಪುಟ್ಟ ವಯಸ್ಸಿನಲ್ಲಿಯೇ ತನ್ನದಾಗಿಸಿಕೊಂಡಿದ್ದಳು. ಸಾಮಾನ್ಯವಾಗಿ ಐದು ವರ್ಷದ ಮಕ್ಕಳಿಗೆ ತಮ್ಮ ಸುತ್ತಲಿನ ಪರಿಸರದ ಅರಿವೇ ಇರುವುದಿಲ್ಲ. ಆದರೆ ಅಂತಹ ವಯಸ್ಸಿನಲ್ಲಿ ಮೀರಾ ಆಧ್ಯಾತ್ಮಿಕ ಅನುಭವವನ್ನು ಪಡೆದಿದ್ದಳು. ಬೆಳಕಿನ ತುಂತುರು ಮಳೆಯ ಮೂಲಕ ಆಧ್ಯಾತ್ಮಿಕ ಅನುಭವವು ಆಗಾಗ್ಗೆ ಆಕೆಗೆ ಆಗುತ್ತಿತ್ತು.

ಒಟ್ಟಾರೆ ಮೀರಾ ತನ್ನ ಅನುಭವಕ್ಕೆ ಬರುತ್ತಿದ್ದ ಆ ಬೆಳಕಿನ ಶಕ್ತಿಯು ಪ್ರಪಂಚದ ಎಲ್ಲಾ ನಿರ್ಜೀವ ವಸತುಗಳಲ್ಲೂ ಇರುವುದೆಂದು ಆಕೆಗೆ ಭಾಸವಾಗುತ್ತಿತ್ತು. ಗಿಡ, ಮರಗಳಲ್ಲಿ, ಹೂಗಳ ಪರಿಮಳದಲ್ಲಿ ಹೀಗೆ ಎಲ್ಲಾ ಕಡೆ ಆ ಶಕ್ತಿಯನ್ನು ಆಕೆ ಅನುಭವಿಸುತ್ತಿದ್ದಳು. ಯಾವುದೇ ಕಠಿಣ ತಪಸ್ಸು ಮಾಡದೆ ರಾಮಕೃಷ್ಣ ಪರಮಹಂಸರಿಗೆ ಹೇಗೆ ಆಧ್ಯಾತ್ಮಿಕ ಅನುಭವಗಳಾಗುತ್ತಿತ್ತೊ ಹಾಗೆಯೇ ಮೀರಾಗೂ ಕೂಡ ಐದನೆಯ ವಯಸ್ಸಿಗೆ ಇಂತಹ ಆಧ್ಯಾತ್ಮಿಕ ಅನುಭವಗಳಾಗುತ್ತಿತ್ತು ಆದರೆ ಇಂತಹ ಅನುಭವಗಳನ್ನು ಆಕೆ ಯಾರ ಮುಂದೆಯೂ ಹೇಳುವಂತೆ ಇರಲಿಲ್ಲ. ಏಕೆಂದರೆ ಪ್ರಾನ್ಸ್‌ನಂತಹ ಪಾಶ್ಚಾತ್ಯ ದೇಶದಲ್ಲಿ ಇಂತಹ ಅನುಭವಗಳಿಗೆ ಯಾವುದೇ ಬೆಲೆಯಿಲ್ಲ. ಅಲ್ಲದೆ ಅದನ್ನು ಹುಚ್ಚು ರೋಗವೆಂದೇ ಅದನ್ನು ಪರಿಗಣಿಸುವ ಸಾಧ್ಯತೆ ಇತ್ತು. ಇದರಿಂದ ಮೀರಾ ಇಂತಹ ಅನುಭವಗಳನ್ನು ಯಾರಿಗೂ ಹೇಳದೆ ತನ್ನ ದಾರಿಯನ್ನು ತಾನೇ ಕಂಡುಕೊಳ್ಳಬೇಕಾಯಿತು. ಮೀರಾಗೆ ಬಹಿರಂಗವಾಗಿ ಗುರುಗಳ ಮಾರ್ಗದರ್ಶನವು ಈ ವಿಷಯದಲ್ಲಿ ಸಿಗದೇ ಹೋದರೂ ಆ ಸಂದರ್ಭದಲ್ಲಿ ಆಕೆಯ ನಿದ್ರಾವಸ್ಥೆಯಲ್ಲಿ ಇಂತಹ ಮಾರ್ಗದರ್ಶಕರು ಬಂದು ಉಪದೇಶಿಸುತ್ತಿದ್ದರಂತೆ. ಅಂತಹ ವಿಶಿಷ್ಟವಾದದ ಚೇತನ ಮೀರಾದಾಗಿತ್ತು ಅವರೇ ಈ ಅಂಶವನ್ನು ಈ ರೀತಿ ದಾಖಲಿಸಿದ್ದಾರೆ.

"ನನ್ನ ಹನ್ನೊಂದರಿಂದ ಹದಿಮೂರನೆ ವಯಸ್ಸಿನ ಅವಧಿಯಲ್ಲಿ ನನಗೆ ಅನೇಕ ಆಧ್ಯಾತ್ಮಿಕ ಮತ್ತು ಚೈತ್ಯಾತ್ಮ ಅನುಭವಗಳ ಪರಂಪರೆ ಉಂಟಾಯಿತು. ಅದರಿಂದ ದೇವರ ಇರುವಿಕೆಯ ಬಗ್ಗೆ ಉನ್ಮೀಲನವಾದುದು ಮಾತ್ರವಲ್ಲದೆ ಅವನೊಡನೆ ಒಂದುಗೂಡುವ ಸಾಧ್ಯತೆಯೂ ಅರಿವಾಯಿತು. ಚಿತ್ತದಲ್ಲೂ ಕರ್ಮದಲ್ಲೂ ಅವನನ್ನು ಪರಿಪೂರ್ಣವಾಗಿ ಸಾಕ್ಷಾತ್ಕರಿಸಿಕೊಳ್ಳಬಹುದೆಂದೂ ಅವನನ್ನು ದಿವ್ಯ ಜೀವನದ ಮೂಲಕ ಭೂಲೋಕದಲ್ಲಿ ಪ್ರತ್ಯಕ್ಷಮಾಡಿಕೊಳ್ಳಬಹುದೆಂದೂ ಅರಿವಾಯಿತು. ಅದನ್ನು ಸಿದ್ಧಿಸಿಕೊಳ್ಳಲು ನಾನು ಕೈಕೊಳ್ಳಬೇಕಾದ ವಾಸ್ತವ ಸಾಧನೆಯ ಮಾರ್ಗದರ್ಶನವನ್ನು ನನ್ನ ದೈಹಿಕ ನಿದ್ರಾವ ಸ್ಥೆಯಲ್ಲಿ ಅನೇಕ ಉಪದೇಶಕರು ನೀಡಿದರು. ಅಂಥ ಮಾರ್ಗದರ್ಶಕರಲ್ಲಿ ಕೆಲವರನ್ನು ನಾನು ತರುವಾಯ ಭೌತಿಕ ಮಟ್ಟದಲ್ಲಿ ಸಂಧಿಸಿದೆ."[2]

ಹೀಗೆ ಮೀರಾ ಬಹಿರಂಗವಾಗಿ ಯಾರಿಂದಲೂ ಮಾರ್ಗದರ್ಶನವನ್ನು ಪಡೆಯದೆ ಆಧ್ಯಾತ್ಮಿಕ ಹಾದಿಯಲ್ಲಿ ಒಂಟಿಯಾಗಿ ಸಾಗುತ್ತಿದ್ದರು. ಆಗಲೇ ಮೀರಾಗೆ ಫ್ರೆಂಚ್ ಭಾಷೆಗೆ ಅನುವಾದವಾಗಿದ್ದ 'ಭಗವದ್ಗಿತೆ' ಮತ್ತು ಸ್ವಾಮಿ ವಿವೇಕಾನಂದರ 'ರಾಜಯೋಗ' ಕೃತಿಗಳು ದೊರಕಿದವು. 'ಭಗವದ್ಗಿತೆ'ಯ ಕೃಷ್ಣನ ವಿಶ್ವರೂಪ ದರ್ಶನ, ವಿಭೂತಿಯೋಗ, ಕರ್ಮಯೋಗ ಭಾಗಗಳು ಮೀರಾಳ ಮನಸ್ಸಿನಲ್ಲಿರುವ ಅಂಶಗಳನ್ನೇ ಹೇಳುತ್ತಿರುವಂತೆ ಅವಳಿಗೆ ಭಾಸವಾಯಿತು. ಆ ಮೂಲಕ ಮೀರಾ ಒಂದು ವಿಶಿಷ್ಟ ರೀತಿಯ ಪ್ರಭಾವಕ್ಕೆ ಒಳಗಾದಳು.

'ಟ್ರೆಡಿಷನ್ ಕಾಸ್ಮಿಕ್' ಎಂಬ ಕೃತಿ ದೊರಕಿತು. ಈ ಕೃತಿಯು 'ಪರಾಶಕ್ತಿ'ಯನ್ನು ಕುರಿತು ಹೇಳುತ್ತಿತ್ತು. ಈ ಕೃತಿಯನ್ನು ಓದಿದ ಮೀರಾಗೆ ಮತ್ತೆ ತನ್ನಲ್ಲಿರುವ ಗುಪ್ತ ಶಕ್ತಿಯು ಸತ್ಯ ದೂರವಾದದ್ದಲ್ಲ ಎಂಬುದು ತಿಳಿಯಿತು. ಗುಪ್ತ ಶಕ್ತಿಯನ್ನು ಕಲಿಯಲು ಗುಹ್ಯ ವಿದ್ಯೆ ಇರುವುದನ್ನು ತಿಳಿದು ಆಕೆಗೆ ಆಶ್ಚರ್ಯವೂ ಆಯಿತು. 'ಟ್ರೆಡಿಷನ್ ಕಾಸ್ಮಿಕ್' ಕೃತಿಯ ಕರ್ತೃ ಮ್ಯಾಕ್ಸ್‌ತೆಅನ್ ಮತ್ತು ಆತನ ಹೆಂಡತಿ ಅಲ್ಮತೆ ಆನ್ ಇಬ್ಬರೂ ಕೂಡ ಗುಹ್ಯ ವಿದ್ಯಾ ಪ್ರವೀಣರೇ. ಮುಂದೆ ಮೀರಾ ಇವರಿಬ್ಬರ ಜೊತೆಗೆ 1905–1907 ರವರೆಗೆ ಎರಡು ವರ್ಷಗಳ ಅವಧಿಯವರೆಗೆ ಇದ್ದು ಗುಹ್ಯಾ ವಿದ್ಯೆಯನ್ನು ಕಲಿತಳು. ಹೀಗೆ ಈ ಅವಧಿಯಲ್ಲಿಯೇ ಮೀರಾ ಇವರೆಗೆ ತನಗೆ ಅನಾಯಾಸವಾಗಿ ಬಂದಿದ್ದ ಅತೀಂದ್ರಿಯ ಶಕ್ತಿಗೆ ವಿದ್ಯೆಯ ಲೇಪನ ಕೊಟ್ಟು ಅದನ್ನು ಕೂಡ ಕಲಿತಳು.

ಆತ್ಮ ಸಾಕ್ಷಾತ್ಕಾರ ಮಾಡಿಕೊಂಡ ಮೀರಾಗೆ ಯಾವ ಶಕ್ತಿಯನ್ನು ಬೇಕಾದರೂ ಕೈವಶ ಮಾಡಿಕೊಂಡು ಅದನ್ನು ಆಡಿಸುವ ಶಕ್ತಿ ಇತ್ತು. ಆದರೆ ಲೋಕ ಶೋಕವನ್ನು ಕಡಿಮೆ ಮಾಡುವುದು ಹೇಗೆ? ಗುಹ್ಯ ವಿದ್ಯೆಯಿಂದ ಲೋಕಲೋಕವು ವಿನಾರಣೆಯಾಗುವುದೇ? ಕೇವಲ ಗುಹ್ಯ ವಿದ್ಯೆಯಿಂದ ಉಂಟಾಗುವ ಪರಿಹಾರ ಶಾಶ್ವತವಾದ ಪರಿಹಾರವಲ್ಲ. ತಾನೊಬ್ಬಳು ಆತ್ಮ ಸಾಕ್ಷಾತ್ಕಾರ ,ಮಾಡಿಕೊಂಡರೆ ಉಳಿದವರ ಸ್ಥಿತಿಯಲ್ಲಿ ಬದಲಾವಣೆಯಾಗುದುದೇ? ಹಾಗೆ ಬದಲಾವಣೆಯಾಗುವುದಿಲ್ಲ ಎಂಬುದನ್ನು ಮೀರಾ ಈಗಾಗಲೇ ಮನಗಂಡಿದ್ದಳು. ಆದ್ದರಿಂದಲೇ ಪ್ರತಿಯೊಬ್ಬ ಜೀವಿಯು ಆತ್ಮಜ್ಞಾನ ಪಡೆಯಬೇಕೆಂಬ ಆಸೆಯು ಆಕೆಯದಾಗಿತ್ತು. ಮುಂದಿನ ಮೀರಾಳ ಹೆಜ್ಜೆಯೆಲ್ಲಾ ಈ ಅಂಶವನ್ನು ಮನಸ್ಸಿನಲ್ಲಿಟ್ಟುಕೊಂಡು ಇಟ್ಟಿದುದೇ ಆಗಿತ್ತು.

ಈ ಸಂದರ್ಭದಲ್ಲಿಯೇ ಮೀರಾಳ ಪತಿ ಪಾಲ್ ರಿಷಾಡ್ 1914 ಫ್ರೆಂಚ್ ಪಾರ್ಲಿಮೆಂಟ್ (ಛೆಂಬರ್ ಆಫ್ ಡೆಪ್ಯುಟೀಸ್)ನ ಚುನಾವಣೆಯ ಪ್ರಚಾರಕ್ಕಾಗಿ ಭಾರತೀಯ ಫ್ರೆಂಚ್ ವಸಾಹತು ಪಾಂಡಿಚೆರಿಯಲ್ಲಿ ಎರಡು ವರ್ಷ ನೆಲೆಸಲು ಬಂದರು. ಪತಿಯ ಜೊತೆ ಮೀರಾ ಕೂಡ ಭಾರತಕ್ಕೆ ಬಂದರು. 1910 ರಲ್ಲೇ ಮೀರಾಳ ಪತಿ ಪಾಲ್ ರಿಷಾಡ್ ಭಾರತಕ್ಕೆ ಬಂದು ಅರವಿಂದರ ಭೇಟಿಯನ್ನು ಮಾಡಿದ್ದರು. ಇದನ್ನು ತಿಳಿದ ದಿನದಿಂದಲೂ ಮೀರಾ ತಾನು ಕೂಡ ಭಾರತಕ್ಕೆ ಬಂದು ಅರವಿಂದರ ದರ್ಶನ ಮಾಡಬೇಕೆಂದು ಆಸೆಯನ್ನು ಇಟ್ಟುಕೊಂಡಿದ್ದರು. ನಂತರ 1914 ರಲ್ಲಿ ಮೀರಾ ಅರವಿಂದರನ್ನು ಭೇಟಿ ಮಾಡಿದರು. ಆ ಪ್ರಥಮ ಭೇಟಿಯಲ್ಲಿ ಅರವಿಂದರು ಮೀರಾಳಲ್ಲಿ ಶ್ರೀಮಾತೆಯ ಪ್ರಭೆಯನ್ನು ನೋಡಿದರು. ಮೀರಾಳು ಅರವಿಂದರನ್ನು ನೋಡಿದಾಕ್ಷಣ ಅರವಿಂದರಲ್ಲಿ ದೇವರನ್ನು ಕಂಡರು. ನಿದ್ರಾವಸ್ಥೆಯಲ್ಲಿ ಬಂದು ಮಾರ್ಗದರ್ಶನ ನೀಡುತ್ತಿದ್ದ ಒಬ್ಬ ವ್ಯಕ್ತಿಯನ್ನು ಕೃಷ್ಣ ಎಂದು ಮೀರಾ ಕರೆದಿದ್ದರು. ಅರವಿಂದರನ್ನು ನೋಡಿದ ಮೇಲೆ ಆ ಕೃಷ್ಣ ಇವರೆಂದು ತಿಳಿದು ಮನಸ್ಸು ಸಂತೋಷದಿಂದ ತುಂಬಿ ಹೋಯಿತು.

ಅರವಿಂದಾಶ್ರಮಕ್ಕೆ ಬಂದ ಮೇಲೆ ಮೀರಾ ತನ್ನೆಲ್ಲಾ ಅಲೌಕಿಕ ವಿದ್ಯೆಯನ್ನು ಬದಿಗಿಟ್ಟು ಅರವಿಂದರ ಆತ್ಮ ವಿದ್ಯೆಯನ್ನು ಕಲಿಯಲು ಆರಂಭಿಸಿದರು.. ಮೀರಾ ಆಶ್ರಮಕ್ಕೆ ಬಂದ ಮೇಲೆ ಇಡಿ ಆಶ್ರಮದ ಸ್ಥಿತಿಯೇ ಬದಲಾಗತೊಡಗಿತು. ಮೀರಾ ಎಂಬ ಪಾಶ್ಚಾತ್ಯ ಮಹಿಳೆಯಿಂದಾಗಿ ಅರವಿಂದರ ಮಹಿಮೆಗಳ ಮಹತ್ವದ ಅರಿವು ಬೇರೆಯ ಜನರಿಗರಿವಾಯಿತು. ಅರವಿಂದರ ಪ್ರಕಾರ ಮೀರಾ ಅವರ ಶಿಷ್ಯರಲ್ಲ. ಸಾಕ್ಷಾತ್ಕಾರ ಮತ್ತು ಸಿದ್ಧಿಗಳು ಇಬ್ಬರಿಗೂ ಆಗಿತ್ತು. "ಶ್ರೀಮಾತೆ ಮತ್ತು ನಾನೂ ಒಂದೆ. ಆದರೆ ಎರಡೂ ದೇಹಗಳಲ್ಲಿ" ಎಂದು ಅರವಿಂದರೇ ಶ್ರೀ ಅರವಿಂದ ವಾನ್ ಹಿಮ್‌ಸೆಲ್ಫ್ ಎಂಬ ಗ್ರಂಥದಲ್ಲಿ ಹೇಳಿಕೊಂಡಿದ್ದಾರೆ.

ಈ ಸಂದರ್ಭದಲ್ಲಿಯೇ ಜಾಗತಿಕ ಯುದ್ಧ ಪ್ರಾರಂಭವಾಗಿತ್ತು. ಆ ಯುದ್ಧದಲ್ಲಿ ಪಾಲ್ಗೊಳ್ಳಲು ರಿಷಾಡ್ ಭಾರತವನ್ನು ಬಿಟ್ಟು ಜಪಾನಿಗೆ ಹೊರಟರು. ಆಗ ಮೀರಾ ಕೂಡ ಪಾಂಡಿಚೆರಿಯ ಆಶ್ರಮವನ್ನು ಬಿಟ್ಟು 1915 ರಲ್ಲಿ ಜಪಾನಿಗೆ ಹೋದರು. ಮತ್ತೆ ನಾಲ್ಕು ವರ್ಷಗಳ ಪಾಂಡಿಚೆರಿಯ ಆಶ್ರಮಕ್ಕೆ ಬಂದು ಆ ಆಶ್ರಮದ ಉನ್ನತಿಗಾಗಿ ಶ್ರಮಿಸತೊಡಗಿದರು.

ಆಶ್ರಮಕ್ಕೆ ಬಂದ ಹೊಸದರಲ್ಲಿ ಅರವಿಂದರು ಮೀರಾರನ್ನು 'ಮೀರಾ' ಎಂದು ಕರೆಯುತ್ತಿದ್ದರು. ಆದರೆ ಕಲಾನಂತರದಲ್ಲಿ ಅರವಿಂದರ ನಾಲಗೆಯ ತುದಿಯಲ್ಲಿ 'ಮೀರಾ' ಎಂಬುದರ ಬದಲು 'ಮಾತಾ' ಎಂಬ ಹೆಸರಿರುತ್ತಿತ್ತು. ಆದರೆ ಆಶ್ರಮವಾಸಿಗಳು 'ಮಾತಾ' ಎಂಬುದಕ್ಕೆ ಹೊಂದಿಕೊಳ್ಳಲಿ ಎಂದು ಬಹಳ ಪ್ರಯತ್ನ ಪಟ್ಟು ಮೀರಾ ಎಂದೇ ಕರೆಯುತ್ತಿದ್ದರು. ಆದರೆ ಸ್ವಲ್ಪ ಕಾಲಾನಂತರದಲ್ಲಿಯೇ ಮೀರಾ 'ಮಾತಾ' ಆಗಿ ಬದಲಾಗಿದ್ದರು.

ದಿನೇ ದಿನೇ ಆಶ್ರಮವು ಬೆಳೆಯುತ್ತಲೇ ಇತ್ತು. ಆಶ್ರಮದ ಬೆಳವಣಿಗೆಯಲ್ಲಿ ಶ್ರೀಮಾತೆಯ ಶ್ರಮದ ಪಾಲು ಬಹುವಾಗಿಯೇ ಇದೆ. ಇದನ್ನು ಮನಗಂಡ ಅರವಿಂದರು 'ಮಾತಾಜಿ ಬಾರದೆ ಇದ್ದಿದ್ದರೆ ನನ್ನ ತತ್ವಜ್ಞಾನವೆಲ್ಲ ವ್ಯವಸ್ತಿತವಾಗಿ ವ್ಯಕ್ತವಾಗುತಿರಲಿಲ್ಲ' ಎಂದು ಆಗಾಗ್ಗೆ ಬಹಿರಂಗವಾಗಿಯೇ ಹೇಳುತ್ತಿದ್ದರು.

ಹೀಗಿರುವಾಗಲೇ ಅರವಿಂದರು ಬಿದ್ದು ಕಾಲಿಗೆ ನೊವನ್ನು ಮಾಡಿಕೊಂಡಿದ್ದರು. ಆ ಸಂದರ್ಭದಲ್ಲಿ ಅರವಿಂದರ ಸಂಪೂರ್ಣ ಜವಬ್ದಾರಿಯನ್ನು ಶ್ರೀಮಾತೆಯವರೇ ವಹಿಸಿಕೊಂಡಿದ್ದರು. ತಾಯಿ ತನ್ನ ಮಗುವನ್ನು ನೋಡಿಕೊಳ್ಳುವ

ರೀತಿಯಲ್ಲಿಯೇ ಆ ವಾತ್ಸಲ್ಯದಿಂದಲೇ ಮಾತೆ ಅರವಿಂದರನ್ನು ನೋಡಿಕೊಂಡರು. "ಶ್ರೀ ಅರವಿಂದರಿಗೆ ಯಾವುದೇ ವಿಚಾರದಲ್ಲಿ ಶ್ರೀಮಾತೆಯ ಮಾತೇ ಕೊನೆಯ ಮಾತು. ಅದು ಅವರಿಗೆ ಶಾಸನ ವೇದವಾಕ್ಯ ಶ್ರೀ ಮಾತೆಯವರಿಗೂ ಅಷ್ಟೆ. ಶ್ರೀ ಅರವಿಂದರ ಮಾತೇವೇದ"[4] ಹೀಗೆ ಅರವಿಂದರು ಮತ್ತು ಶ್ರೀಮಾತೆ ಇಬ್ಬರೂ ಒಂದೇ ಉಸಿರು ಎರಡು ದೇಹದಂತಿದ್ದರು.

1950 ಡಿಸೆಂಬರ್ 5 ರಂದು ಅರವಿಂದರು ತಮ್ಮ ಅನಾರೋಗ್ಯದ ಕಾರಣದಿಂದ ವಿಧಿವಶರಾಗುತ್ತಾರೆ. ಇಡಿ ಆಶ್ರಮವೇ ಅರವಿಂದರಿಲ್ಲದೆ ಕತ್ತಲಲ್ಲ ಮುಳುಗುತ್ತದೆ. ಆದರೆ ಆ ಸಂದರ್ಭದಲ್ಲಿ ಮತ್ತೆ ಆಶ್ರಮಕ್ಕೆ ಉತ್ಸಾಹವನ್ನು ತುಂಬುವ ಕೆಲಸವನ್ನು ಶ್ರೀಮಾತೆ ಮಾಡುತ್ತಾರೆ. ಆಶ್ರಮ ಉಚ್ಛ್ರಾಯದ ಸ್ಥಿತಿಗೆ ತಲುಪುತ್ತದೆ.

ಆದರೆ 1973ರ ವೇಳೆಗೆ ಶ್ರೀ ಮಾತೆಯ ದೇಹದ ಆರೋಗ್ಯವು ಕೂಡ ಕ್ಷೀಣಿಸುತ್ತದೆ. ಆದರೂ ಆಶ್ರಮದ ಬೆಳವಣಿಗೆಗೆ ಶ್ರೀಮಾತೆ ಹಗಲಿರುಳು ಶ್ರಮಿಸುತ್ತಾರೆ. 1973ರ ನವೆಂಬರ್ 17ರಂದು ಶ್ರೀಮಾತೆ ದೇಹತ್ಯಾಗವನ್ನು ಮಾಡುತ್ತಾರೆ. ಅರವಿಂದರ ಸಮಾಧಿಯ ಮೇಲಿನ ಭಾಗದಲ್ಲಿಯೇ ಇವರ ಸಮಾಧಿಯನ್ನು ಮಾಡಲಾಗುತ್ತದೆ. ಶ್ರೀ ಮಾತೆಯವರ ಸಾವಿನಿಂದಾಗಿ ಪಾಂಡಿಚೆರಿಯ ಅರವಿಂದ ಆಶ್ರಮದ ಒಂದು ಪ್ರಮುಖ ಅಧ್ಯಾಯದ ಅಂತ್ಯವಾದಂತಾಯಿತು.

'ನಾನು ಇನ್ನೂ ಮಗುವಾಗಿದ್ದಾಗ–ಹದಿಮೂರು ವರ್ಷದವಳಿರುವಾಗ ಸುಮಾರು ಒಂದು ವರ್ಷದ ತನಕ–ಪ್ರತಿರಾತ್ರಿ ಹಾಸಿಗೆಯ ಮೇಲೆ ಮಲಗಿದ ಕೂಡಲೆ ನನ್ನ ದೇಹದಿಂದ ನಾನು ಹೊರಬಂದಂತೆ ನೇರವಾಗಿ ಮನೆಯ ಮಾಳಿಗೆಯ ಮೇಲಕ್ಕೆ ತರುವಾಯ ನಗರದ ಮೇಲೆ ಬಹು ಎತ್ತರಕ್ಕೆ ಏರಿ ಹೋದಂತೆ ಭಾಸವಾಗುತ್ತಿತ್ತು. ನನಗಿಂತ ನೀಳವಾದ ಒಂದು ಸುವರ್ಣಮಯ ಭವ್ಯ ಉಡುಗೆಯನ್ನು ತೊಟ್ಟುಕೊಂಡಂತೆ ಕಂಡೆ. ನಾನು ಮೇಲು ಮೇಲಕ್ಕೆ ಹೋದಂತೆ ಆ ನನ್ನ ಉಡುಗೆ ನೀಳ ನೀಳವಾಗುತ್ತ ನನ್ನ ಸುತ್ತ ಮುತ್ತ ವಿಶಾಲವಾಗಿ ಹರಡಿಕೊಂಡು ಇಡೀ ನಗರದ ಮೇಲೆ ದೊಡ್ಡ ಮೇಲ್ಹಾವಣಿಯಂತಾಗುತ್ತಿತ್ತು. ಆಗ ಎಲ್ಲ ದಿಕ್ಕಿಗಳಿಂದಲೂ ಸ್ತ್ರೀಯರು ಪುರುಷರು ಮಕ್ಕಳು ಮುದುಕರು, ದುಃಖಿಗಳು, ರೋಗಿಗಳು, ಅಸುಖಿಗಳು ಹೊರಬಂದು (ಗುಡಾರದಂತೆ) ಹರಡಿಕೊಂಡಿದ್ದ ನನ್ನ ಬಂಗಾರದ ಉಡುಗೆಯ ನೆರಳಿನಡಿಯಲ್ಲಿ ಬಂದು ತಮ್ಮ ದುಃಖವನ್ನು, ತೊಂದರೆಯನ್ನು, ನೋವು ನೆರಳುಕೆಯನ್ನು ನಿವೇದಿಸಿಕೊಂಡು ಪರಿಹಾರಕ್ಕಾಗಿ ಪರಿಪರಿಯಾಗಿ ಬೇಡಿಕೊಳ್ಳುತ್ತಿರುವಂತೆ ನನಗೆ ತೋರುತ್ತಿತ್ತು. ಅವರ ಆಕ್ರಂದನಕ್ಕೆ ಉತ್ತರವಾಗಿ ಮೃದುವಾದ ಮತ್ತು ಜೀವಂತವಾದ ನನ್ನ ಉಡುಗೆ ಒಬ್ಬೊಬ್ಬರತ್ತ ಚಾಚುತ್ತಿತ್ತು. ಅವರು ಅದನ್ನು ಮುಟ್ಟಿದೊಡನೆ ಅವರಿಗೆ ಸಮಾಧಾನವಾಗುತಿತ್ತು.

ರೋಗ ಗುಣವಾಗುತ್ತಿತ್ತು. ಆಗ ಅವರು ಹೊರಬರುವುದಕ್ಕೆ ಮುಂಚೆ ಇದ್ದುದಕ್ಕಿಂತ ಎಷ್ಟೋ ಸುಖಿಯಾಗಿ ಸಬಲರಾಗಿ ತಮ್ಮ ತಮ್ಮ ಸ್ವದೇಹದೊಳಕ್ಕೆ ಮರು ಪ್ರವೇಶ ಮಾಡುತ್ತಿದ್ದರು. ಇದಕ್ಕಿಂತ ಸುಂದರ ಮತ್ತು ಸುಖದಾಯಕವಾದುದು ನನಗೇನು ಇದ್ದಂತೆ ಅನಿಸುತ್ತಿರಲಿಲ್ಲ"[5]

ಇದು ಮೀರಾ ಚಿಕ್ಕವಳಿದ್ದಾಗ ಕಂಡ ಕನಸಾಗಿತ್ತು. ಬೇರೆಯವರ ದುಃಖವನ್ನು ಪರಿಹಾರ ಮಾಡುವುದರಲ್ಲಿಯೇ ಆಕೆಯ ಸುಖವಿತ್ತು. ಮೀರಾ ಕಂಡ ಈ ಕನಸನ್ನು ಮುಂದೆ ಶ್ರೀ ಮಾತಾ 'ಅರವಿಂದಾಶ್ರಮದ' ಬೆಳಕಿನಲ್ಲಿ ನನಸಾಗಿದ್ದರು. ಶ್ರೀ ಮಾತಾ ತೊಂಭತ್ತೈದು ವರ್ಷದ ತುಂಬು ಜೀವನದ ಅವಧಿಯಲ್ಲಿ ತಾವು ಕಂಡ ಕನಸನ್ನು ನನಸಾಗಿಸುವಲ್ಲಿ ಶ್ರಮಿಸಿದರು. ಜಗತ್ತಿನ ಜೀವಗಳ ದುಃಖವನ್ನು ನಿವಾರಿಸಲೆಂದೇ ಶ್ರೀಮಾತೆ ಹುಟ್ಟಿ ಬಂದವರಾಗಿದ್ದರು. ಲೋಕ ಶೋಕದ ಹೊರೆಯನ್ನು ನಿವಾರಿಸಲು ಈ ಶ್ರೀಮಾತೆ ಹಗಲಿರುಳು ಶ್ರಮಿಸಿ ಕೊನೆಗೆ ದೇಹತ್ಯಾಗ ಮಾಡಿದರು.

* * * * * * * * *

ಈ ಪಾಂಡಿಚೆರಿಯ ಅರವಿಂದಾಶ್ರಮದ ಬೆಳಕಿನಲ್ಲಿ ಎಷ್ಟೋ ಜನರು ಮಿಂದಿದ್ದಾರೆ. ಸ್ತ್ರೀಯರು, ರೋಗಿಗಳು, ಮುದುಕರು, ಪುರುಷರು, ದುಃಖಿಗಳು, ಅಸುಖಿಗಳು ಮಾತ್ರ ಈ ಅರವಿಂದಾಶ್ರಮದ ನೆರಳಿಗೆ ಬರಲಿಲ್ಲ. ಅರವಿಂದರು ಮತ್ತು ಶ್ರೀ ಮಾತೆಯವರ ಉಜ್ವಲವಾದ ವ್ಯಕ್ತಿತ್ವವು ಎಲ್ಲಾ ವರ್ಗದ ಜನರನ್ನು ತಮ್ಮೆಡೆಗೆ ಆಕರ್ಷಿಸಿತು. ಆಗಿನ ಕಾಲದ ವಿದ್ಯಾವಂತರಿಗೆ ಈ ಅರವಿಂದಾಶ್ರಮವು ಒಂದು ಬಹು ದೊಡ್ಡ ಆದರ್ಶವಾಗಿತ್ತು. ಗಾಂಧೀಜಿಯವರ ಸತ್ಯ, ಅಹಿಂಸೆ, ಸತ್ಯಾಗ್ರಹಗಳಂತೆ ಪಾಂಡಿಚೆರಿ ಆಶ್ರಮದ ಅರವಿಂದರು ಮತ್ತು ಶ್ರೀಮಾತೆಯ ತತ್ವಗಳು ಅಂದಿನ ಜನರನ್ನು ಸೆಳೆಯಿತು. ಇದಕ್ಕೆ ಆಗಿನ ನವೋದಯ ಕವಿಗಳು ಕೂಡ ಹೊರತಾಗಿರಲಿಲ್ಲ. ನವೋದಯ ಕವಿಗಳನ್ನು ರಾಮಕೃಷ್ಣ ಪರಮಹಂಸ, ವಿವೇಕಾನಂದ, ಶಾರದಾದೇವಿ, ಅರವಿಂದ, ಶ್ರೀಮಾತೆ ಇವರೆಲ್ಲಾ ಪ್ರಭಾವಿಸಿದರು. ಇವರೆಲ್ಲರ ವ್ಯಕ್ತಿತ್ವವೇ ಹಾಗೇ ತಮ್ಮ ಸಾಧನೆಯ ಮೂಲಕ ಆಗಿನವರಿಗೆ ಆದರ್ಶಪ್ರಾಯರಾಗಿದ್ದರು.

ಇಂಗ್ಲೀಷ್‌ನ ರೊಮ್ಯಾಂಟಿಕ್ ಕಾವ್ಯ ಪರಂಪರೆಯು ನವೋದಯ ಕಾವ್ಯವನ್ನು ಪ್ರಭಾವಿಸಿದೆ. ಇದರ ಜೊತೆಗೆ ಈ ಮೇಲಿನ ಆದರ್ಶ ವ್ಯಕ್ತಿಗಳ ತತ್ವಗಳು ಸಹ ನವೋದಯ ಕಾವ್ಯವನ್ನು ಪ್ರಭಾವಿಸಿದೆ. ಕುವೆಂಪು ಸಾಹಿತ್ಯದ ಮೇಲೆ ರಾಮಕೃಷ್ಣ ಪರಮಹಂಸ, ಅರವಿಂದರು, ಗಾಂಧೀಜಿಯವರ ಪ್ರಭಾವ ಆಗಿರುವಂತೆಯೇ ಅವರ ಸಮಕಾಲೀನರಾದ ಬೇಂದ್ರೆಯವರ ಕಾವ್ಯದಲ್ಲೂ ಅರವಿಂದರ ಮತ್ತು ಶ್ರೀ ಮಾತೆಯ ಪ್ರಭಾವವನ್ನು ನಾವು ನಿಚ್ಚಳವಾಗಿ ಗುರ್ತಿಸಬಹುದಾಗಿದೆ. ಈ ಪಾಂಡಿಚೆರಿಯ ಆಶ್ರಮ ಧಾರವಾಡದ ಗೆಳೆಯರ ಗುಂಪಿನ ಒಂದು ಅವಿಭಾಜ್ಯ ಅಂಗವಾಗಿತ್ತು. ಈ ಗೆಳೆಯರ ಗುಂಪಿನವರು ಆಗಾಗ್ಗೆ ಪಾಂಡಿಚೆರಿಯ ಆಶ್ರಮಕ್ಕೆ ಭೇಟಿಕೊಡುತ್ತಿದ್ದರು. ಆ ಗೆಳೆಯರ

ಗುಂಪಿನ ಪೊರೆ ಮಧುರ ಚೆನ್ನ ಮತ್ತು ಬೇಂದ್ರೆಗೆ ಈ ಪಾಂಡಿಚೆರಿಯ ಅರವಿಂದಾಶ್ರಮದ ನಂಟು ಹೆಚ್ಚಾಗಿಯೇ ಇತ್ತು. ಈ ನಂಟನ್ನು ತಮ್ಮ ಸಾಹಿತ್ಯಕ್ಕೂ ತಂದದ್ದು ಅವರ ಹೆಗ್ಗಳಿಕೆಯೇ ಸರಿ. ನವೋದಯ ಕವಿಗಳ ಸಾಹಿತ್ಯದಲ್ಲಿ ಇಂತಹ ಆದರ್ಶಗಳು ಪರೋಕ್ಷವಾಗಿ ಬಂದರೆ ಬೇಂದ್ರೆ ಕಾವ್ಯದಲ್ಲಿ ಇದು ಪ್ರತ್ಯಕ್ಷವಾಗಿ ಬಂದಿರುವುದು ವಿಶೇಷ.

ಶ್ರೀ ಅರವಿಂದರಷ್ಟೇ ಪ್ರಖರವಾಗಿ ಶ್ರೀಮಾತೆ ತಮ್ಮ ವ್ಯಕ್ತಿತ್ವದಿಂದ ಬೇಂದ್ರೆಯವರನ್ನು ಪ್ರಭಾವಿಸಿದ್ದರು. ಬೇಂದ್ರೆ ತಮ್ಮ ಮೇಲಾದ ಶ್ರೀಮಾತೆಯ ಪ್ರಭಾವನ್ನು ಹೀಗೆ ಗುರುತಿಸಿದ್ದಾರೆ. "ಪಾಂಡಿಚೆರಿಯ ಶ್ರೀಮಾತೆಯವರ ದರ್ಶನವಾದ ಮೇಲಂತೂ ಎಲ್ಲ ತಾಯ್ತನವನ್ನು ಎತ್ತಿ ಹಿಡಿಯುವ ಆಧಾರವೇ ಕಂಡಂತಾಯಿತು"[6]. ಈ ಮೊದಲೇ ವಿವರಿಸಿದಂತೆ ಬೇಂದ್ರೆಯವರದ್ದು ಸ್ತ್ರೀ ಪೋಷಿತ ಬಾಲ್ಯ, ಅಜ್ಜಿ, ತಾಯಿಯ ಪ್ರಭಾವದಿಂದ ಬೇಂದ್ರೆಯವರ ಸಾಹಿತ್ಯದಲ್ಲಿ ಮಾತೃ ಪ್ರತಿಮೆಗಳು ಮೂಡಿ ಬರಲು ಕಾರಣವಾಯಿತು. ಶ್ರೀಮಾತೆಯ ದರ್ಶನದಿಂದಾಗಿ ಬೇಂದ್ರೆಯ ಈ ಮಾತೃಪ್ರಜ್ಞೆ ಇನ್ನೂ ಗಟ್ಟಿಯಾಯಿತು. ಬೇಂದ್ರೆಯವರು ಶ್ರೀಮಾತೆಯನ್ನು ಕುರಿತು ಅನೇಕ ಸ್ವತಂತ್ರವಾದ ಕವನಗಳನ್ನು ರಚಿಸಿದ್ದಾರೆ. ಶ್ರೀ ಮಾತೆಯವರನ್ನು ಕುರಿತಾದ ಅವರ ಭಾವನೆಗಳಿಗೆ ಅಕ್ಷರದ ರೂಪವನ್ನು ಬೇಂದ್ರೆ ನೀಡಿದ್ದಾರೆ. ಬೇಂದ್ರೆಯವರ ಈ ಕವನಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ ಶ್ರೀ ಮಾತೆಯನ್ನು ಅವರು ಆಧ್ಯಾತ್ಮಿಕ ಮಾತೆಯಾಗಿಯೇ ಕಂಡಿರುವುದು ಗೊತ್ತಾಗುತ್ತದೆ. ಶ್ರೀಮಾತೆಯ ದರ್ಶನದ ಭಾವವನ್ನು ಹಿಡಿದಿಡುವ ಕವಿತೆಯಿಂದ ಹಿಡಿದು ಆಧ್ಯಾತ್ಮಿಕ ಮಾತೆಯನ್ನಾಗಿ ಶ್ರೀಮಾತೆಯನ್ನು ನೋಡುವ ಕವಿತೆಯವರೆಗೂ ಬೇಂದ್ರೆಯವರು ಶ್ರೀಮಾತೆಯನ್ನು ವಸ್ತುವಾಗಿಟ್ಟು ಕವಿತೆಯನ್ನು ರಚಿಸಿದ್ದಾರೆ.

ಶ್ರೀಮಾತೆ ಮಾತುಗಳನ್ನು ಕಲಿಸುವ ಮಾತೆ ಹಾಗೆ ಉಸಿರನ್ನು ಕಾಯುವ ಉಸಿರಾಗಿದ್ದಾರೆ. ಜೊತೆಗೆ ಶ್ರೀಮಾತೆಯು ಅಗ್ನಿ, ಸೋಮ, ಭಾನು ಇಂತಹ ಶ್ರೇಷ್ಠತೆಗಳ ರೂಪಕವಾಗಿ ಬೇಂದ್ರೆ ಮೂಡಿಸಿದ್ದಾರೆ. ತನ್ನ ವ್ಯಕ್ತಿತ್ವದ ವಿಕಾಸಕ್ಕೆ ಅನುವು ಮಾಡಿಕೊಡುವಂತೆ ಬೇಂದ್ರೆ ಸವಿನಯವಾಗಿ ಪ್ರಾರ್ಥಿಸುತ್ತಿದ್ದಾರೆ. ಒಟ್ಟಾರೆ ಬೇಂದ್ರೆಯ ಜೀವವನ್ನು ತುಂಬಿರುವ ಶಕ್ತಿಯಾಗಿ ಶ್ರೀಮಾತೆ ಕಾಣಿಸಿಕೊಂಡಿದ್ದಾರೆ.

*"ಬಗೆಯೊಳಿಹ ಜಗವೆ ನೀನುs*
*ಒಗಮಿಸಿ ಬಾರೆ ಬಾ ಆಗಿ ಭಾನು*
*ಜೀವದೊಳು ದೇವಿ ನೀನುs*
*ನೀನಗ್ನಿ ಸೋಮ ನೀ ಭಾನು ನೀನು"* [7]

(ಶ್ರೀ ಮಾತೆಗೆ)

ಮನುಷ್ಯನು ಎರಡು ಹಂತಗಳಲ್ಲಿ ಬೆಳೆಯುತ್ತಾ ಹೋಗುತ್ತಾನೆ. ಒಂದು ಬೇರೆಯವರನ್ನು ಅರ್ಥ ಮಾಡಿಕೊಂಡು ಜೀವನ ಸಾಗಿಸುವುದು. ಎರಡನೆಯದು ಬೇರೆಯವರ ಜೊತೆಗೆ ತನ್ನನ್ನು ತಾನು ಅರ್ಥಮಾಡಿಕೊಳ್ಳುವಲ್ಲಿ ಬೇರೆಯವರ ಸಹಾಯ ಬೇಕಾಗುತ್ತದೆ. ಅವರ ಸಹಾಯ ಸಹಕಾರದಿಂದಲೇ ಮನುಷ್ಯನಿಗೆ ತನ್ನನ್ನು ತಾನು ಅರ್ಥಮಾಡಿಕೊಳ್ಳಲು ಸಾಧ್ಯವಾಗುತ್ತದೆ. ಇದೇ ರೀತಿ ಬೇಂದ್ರೆಯವರಿಗೆ ಈ ಎರಡನೇ ಹಂತದಲ್ಲಿ ಸಹಾಯಕರಾಗಿ ನಿಂತವರು ಶ್ರೀಮಾತೆ. ಈ ಮೊದಲು ಬೇಂದ್ರೆ ಅವರನ್ನು ತಿಳಿಯದೆ ವಿನೋದದಲ್ಲಿ ಕಾಲಹರಣ ಮಾಡುತ್ತಿದ್ದರು. ನಂತರ ಶ್ರೀ ಮಾತೆಯ ಸಹಾಯದಿಂದ ಹಾಲಿನಲ್ಲಿ ಬೆಣ್ಣೆಯು ತೇಲಿ ಬರುವ ಹಾಗೆ ಬೇಂದ್ರೆ ಹಾಲಿನಂತಹ ತಮ್ಮ ಮನಸ್ಸನ್ನು ಅರ್ಥವೆಂಬ ಕೋಲಿನಿಂದ ಕದಡಿ ಅರಿವು ಎಂಬ ಬೆಣ್ಣೆಯನ್ನು ಪಡೆದರು.]

*"ಮೈಯೊಳಗೆ ಮರಸಂದು ಮಸಗಾಡಿದನು ಮಿಡುಕಿಗೆ ನಾನು*

*ಮನದ ಬನದಲಿ ಬಿನದವಾಡಿದೆ ತನ್ನ ತಿಳಿಯದೆ ತಾನು*

*ಬೆಣ್ಣೆ ಹಾಲಲಿ ಏಳುವಂದದಿ ಎತ್ತು ನಿನ್ನ ಬಳಿಗೆ*

*ಅಡಿಗಡಿಗೆ ನಾ ಮಣಿವೆ ತಾಯಿಯ ಪಾದ ಪದ್ಮಂಗಳಿಗೆ"*

**(ಪಾದಪದ್ಮಕೆ)**

ಶ್ರೀಮಾತೆ ಪಾಂಡಿಚೆರಿಯ ಅರವಿಂದಾಶ್ರಮದ ಮಹಡಿ ಮೇಲೆ ನಿಂತು ಕೆಳಗೆ ತನ್ನ ದರ್ಶನಕ್ಕೆ ಕಾಯುತ್ತಿದ್ದ ಸಾವಿರಾರು ಜನರಿಗೆ ದರ್ಶನವನ್ನು ನಿಡುತ್ತಿದ್ದರು. ಶ್ರೀಮಾತೆಯ ದರ್ಶನವು ಜನ್ಮಜನ್ಮದ ಪುಣ್ಯದ ಫಲ. ಆಕೆಯ ಚಂದಿರನಂತಹ ಮುಖವನ್ನು ನೋಡಲು ದರ್ಶನಾರ್ಥಿಯಾಗಿ ಹೋಗಿದ್ದ ಬೇಂದ್ರೆಯು ಕಾತುರರಾಗಿದ್ದಾರೆ. ಶ್ರೀಮಾತೆ = ವಾತ್ಸಲ್ಯ ಎನ್ನುವುದು ಬೇಂದ್ರೆಯವರ ಅಭಿಮತ. ಇಂತಹ ವಾತ್ಸಲ್ಯ ಮೂರ್ತಿಯನ್ನು ತನಗೆ ದರ್ಶನ ನೀಡುವಂತೆ ಪ್ರಾರ್ಥಿಸುತ್ತಿದ್ದಾರೆ. ಈ ಮುಂದಿನ ಪದ್ಯ ಭಾಗದಲ್ಲಿ ಶ್ರೀಮಾತೆಯ ಮಹಾದರ್ಶನದ ಕಾಲಕ್ಕೆ ಬೇಂದ್ರೆಯವರ ಮನಸ್ಸು ತುಡಿಯುವ ಭಾವವನ್ನು ನೋಡಬಹುದಾಗಿದೆ.

*"ಜನ್ಮ ಜನ್ಮದ ಸುಕೃತವೇ ಬಾ*

*ನನಗೆ ಬೆಂಬಲವಾಗುತ*

*ಜನ್ಮ ಜನ್ಮದ ದುಷ್ಕೃತವೆ ಬಾ*

*ಮಾತೃ ಚರಣಕೆ ಬಾಗುತ*

*ಯುಗಯುಗದ ವಾತ್ಸಲ್ಯವೇ ಬಾ*

*ಹೊಮ್ಮ ಹೊನಲು ಹರಿಯುತ*

*ದೈವಗರ್ಭದ ಕೃಪೆಯ ಬಾ ಬಾ*

*ಕರೆದು ಅಮೃತವ ಕರೆಯುತ"*[9]

(ದರ್ಶನ)

ಒಬ್ಬ ವ್ಯಕ್ತಿಯ ಮುಖದ ಮೇಲಿನ ಸ್ಮಿತವಾದ ನಗೆ ಬೇರೆಯವರ ಜೀವನಕ್ಕೆ ಸ್ಫೂರ್ತಿಯಾಗಬಲ್ಲದು. ಅವರ ಜೀವನದಲ್ಲಿ ಶಾಂತಿ, ನೆಮ್ಮದಿಗಳನ್ನು ತಂದು ಕೊಡಬಲ್ಲದು. ಸಾಮಾನ್ಯವಾಗಿ ತಾಯಿಯ ನಗೆಗೆ ಈ ರೀತಿಯ ಶಕ್ತಿ ಇರುತ್ತದೆ. ಆಕೆ ತನ್ನ ಒಡಲಿನ ಕಷ್ಟವನ್ನು ಮುಚ್ಚಿಕೊಂಡು ತನ್ನ ಮುಖದ ಮೇಲೆ ಸ್ವಾರ್ಥರಹಿತವಾದ ನಗೆಯ ಹೂವನ್ನು ಅರಳಿಸುತ್ತಾಳೆ. ಅವಳ ಆ ಒಂದು ನಗೆ ಅವಳ ಸನಿಹಕ್ಕೆ ಬರುವವರಿಗೆ ಸ್ಫೂರ್ತಿಯನ್ನು ನಿಡುತ್ತದೆ. ಬೇಂದ್ರೆಯವರು ತಮ್ಮ ಆಧ್ಯಾತ್ಮ ಮಾತೆಯಾದ ಶ್ರೀಮಾತೆಯವರಲ್ಲಿ ಇಂತಹ ನಗೆಯನ್ನು ಕಂಡಿದ್ದಾರೆ. ಆ ತಾಯಿಯ ಮುಖದ ಮೇಲಿನ ಆ ಸ್ಮಿತವಾದ ನಗೆಯಿಂದ ಸ್ಫೂತಿಯನ್ನು ನೆಮ್ಮದಿಯನ್ನು ಬೇಂದ್ರೆಯವರು ಪಡೆದಿದ್ದಾರೆ. ತಮ್ಮ ಬಾಳಿನ ಎಲ್ಲಾ ನೋವು, ಕಷ್ಟಗಳನ್ನು ನಾಶ ಮಾಡುವ ಶಕ್ತಿ ಆ ತಾಯಿಯ ನಗೆಗಿದೆ ಎಂಬ ನಂಬಿಕೆಯನ್ನು ಬೇಂದ್ರೆಯವರು ಹೊಂದಿದ್ದಾರೆ. ಶ್ರಿಮಾತೆಯು ಕೂಡ ಈ ಲೋಕಶೋಕವನ್ನು ನಿವಾರಣೆ ಮಾಡಲೆಂದೇ ಹುಟ್ಟಿ ಬಂದ ಜಗನ್ಮಾತೆ ಅಲ್ಲವೇ?

*"ಸಾವಿನೊಂದು ಪೊರೆಯ ತೊರೆದ ಜೀವ ಮೆರೆಯುವಂತೆಯೆ*

*ನೋವುಗೀವು ಸುಳ್ಳು ಎನಿಸಿ ಹಿಗ್ಗು ಹರಿಯುವಂತೆಯೆ*

*ಇರವಿನೊಂದು ಸುಳಿಯ ಒಳಗೆ ಬೇರೆ ಸಿರಿಯು ತೆರೆವುದು*

*ಇಲ್ಲವೆನಿಸಿದೊಂದು ಬಾಲ ಅಹುದೆನುವೊಲು ಕರೆವುದು"*[10]

(ತಾಯಿನಗೆ)

ಲಿಯೊನಾರ್ಡೊ ಡಾ ವಿನ್ಸಿ ವಿಶ್ವವಿಖ್ಯಾತ ಚಿತ್ರಕಾರ ಅವನ ಹೆಸರು ಕೇಳಿದ ತಕ್ಷಣ ನೆನಪಾಗುವುದು ಅವನ 'ಮೊನಲಿಸಾ' ಚಿತ್ರ ಹೆಣ್ಣಿನ ಸುಂದರವಾದ ನಗೆಯನ್ನು ಕುಂಚದಲ್ಲಿ ಸುಂದರವಾಗಿ ಚಿತ್ರಿಸಿದ ಕೀರ್ತಿ ಅವನಿಗೆ ಸಲ್ಲುತ್ತದೆ. ನಗೆಯಂತಹ ಸುಂದರವಾದ ಭಾವವನ್ನು ಚಿತ್ರದಲ್ಲಿ ಸಮರ್ಥವಾಗಿ ಆತ ಹಿಡಿದಿಟ್ಟಿದ್ದಾನೆ. ಪಾಂಡಿಚೆರಿಯ ಮದರ್‌ನ ನಗೆಯನ್ನು ಕಂಡಾಕ್ಷಣ ಬೇಂದ್ರೆಯವರಿಗೆ 'ಮೊನಲಿಸಾ' ನೆನಪಾಗಿದ್ದಾಳೆ. ಲಿಯೊನಾರ್ಡೋ ಡಾ ವಿನ್ಸಿಯ ಮೊನಲಿಸಾಳ ಚಿತ್ರ ಪಾಂಡಿಚೆರಿಯ ಮದರ್‌ನಲ್ಲಿ ಸಜೀವ ಚಿತ್ರವಾಗಿದೆ.

*"ಹಾಳೆಯಲ್ಲ, ಬಾಳೆ ಇಲ್ಲಿ ಬೆಳಕುದುಂಬಿ ಬಂದಿದೆ:*

*ಗೊಂಬೆಯೇ? ಸಜೀವ ಬಿಂಬ ಅರಿವು ತುಂಬಿ ನಿಂದಿವೆ:*

*ಶಾಂತಿನಿಧಿ ಗಂಭೀರ ಮೌನ ಇಲ್ಲಿ ಕಣ್ಣ ತಾಳಿದೆ:*

*ಮುಚ್ಚಿದೆರಡು ತುಟಿಗಳಲ್ಲಿ ಅರ್ಥವೆಲ್ಲ ಹೂಳಿದೆ"*[11]

(ತಾಯನಗೆ)

'It is through the mother that all things are attained ; ಇದು ಶ್ರಿ ಅರವಿಂದರ ಉಕ್ತಿ. ಎಲ್ಲಿ ಸಿದ್ಧಿಗಳು ಮಾತೆಯ ಮೂಲಕ ಎನ್ನುವುದು ಇದರರ್ಥ. ಈ ಉಕ್ತಿಯನ್ನು ಬೇಂದ್ರೆ 'ದಿ ಮದರ್" ಎಂಬ ಕವನರೂಪಕ್ಕೆ ಇಳಿಸಿದ್ದಾರೆ. ಇಲ್ಲಿ ಬೇಂದ್ರೆ ಶ್ರೀ ಮಾತೆಯ ವಿಶಿಷ್ಟವಾದ ಉದ್ಭವ ಶಕ್ತಿಯನ್ನು ದಾಖಲಿಸಿದ್ದಾರೆ. ಶ್ರೀಮಾತೆಯೆಂದರೆ ಕೇವಲ ಪಾಂಡಿಚೇರಿಯ ಮದರ್ ಅಷ್ಟೇ ಅಲ್ಲ. ಬೇಂದ್ರೆಯವರ ಪಾಲಿಗೆ ಆಕೆ ಎಲ್ಲಾ ಸಿದ್ಧಿಗಳ ಉದ್ಭವ ಶಕ್ತಿ.

*"ಮಾಯೆಯನ ಮೊಲೆಗೊಳಿಸಿ ಹಾಲ್ಗುಡಿಸಿ, ಈ ತಾಯಿ*

*ಗಾಯತ್ರಿ ಮಂತ್ರಕ್ಕೆ ಭಾಷ್ಯ ಬರೆದವಳು*

*ಅಶ್ವಪತಿಯ ಉಪಾಸ್ಯ ದೇವತೆಯು ಸಾವಿತ್ರಿ*

*ಸೂರ್ಯನಾಚೆಯ ಸೋಮಹಾಸ್ಯ ಕರೆದವಳು*

*ಸತ್ಯವಂತರ ಮರ್ತ್ಯಡಿಂಭಗಳ ಗೊಂಬೆಯಲಿ*

*ಶಮರಮಿತ ನವಬಿಂಬ ಸೃಷ್ಟಿ ಮೆರೆದವಳು*

*ಮಾರ್ತಾಂಡ ಮಂಡಲದ ಅಂಡವನು ಪುಟಗೊಳಿಸಿ*

*ಹಂಸಜಾತಿಯ ಜೀವಜಾತಿ ತೆರೆದವಳು"* [12]

(ದಿಮದರ್)

ಈ ಮೊದಲೆ ಹೇಳಿದಂತೆ ಶ್ರೀಮಾತೆ ಬೇಂದ್ರೆಯವರ ಪಾಲಿಗೆ ಆಧ್ಯಾತ್ಮದ ತಾಯಿಯೇ ಆಗಿದ್ದಾರೆ. ಆಧ್ಯಾತ್ಮದ ಬಗ್ಗೆ ಬೇಂದ್ರೆಯವರಿಗೆ ಒಂದು ವಿಶಿಷ್ಟವಾದ ಎಚ್ಚರವನ್ನು ಮೂಡಿಸಿದವರೇ ಪಾಂಡಿಚೆರಿಯ ಮದರ್ ಬೇಂದ್ರೆಯವರ ಆಧ್ಯಾತ್ಮದ ಹಸಿವನ್ನು ನೀಗಿಸಿದವರು ಪಾಂಡಿಚೆರಿಯ ಮದರ್. ತಾಯಿ ಅಂಬಿಕೆ ಬೇಂದ್ರೆಯವರ ಲೌಕಿಕ ಜೀವನವನ್ನು ರೂಪಿಸಿದರೆ ಶ್ರೀಮಾತೆ ಬೇಂದ್ರೆಯವರ ಆಧ್ಯಾತ್ಮಿಕ ಜಗತ್ತನ್ನು ರೂಪಿಸಿದರು. 'ಕರುಣಾಳು ಬಾ ಬೆಳಕೆ ಮುಸುಕಿದ್ದೀ ಮಬ್ಬಿನಲ್ಲಿ ಕೈ ಹಿಡಿದು ನೀ ನಡೆಸೆನ್ನನು' ಎನ್ನುವ ಕವಿ ವಾಣಿಯಂತೆ ಬೇಂದ್ರೆಯವರು ಆಧ್ಯಾತ್ಮದ ಬೆಳಕಿಗಾಗಿ ಶ್ರೀಮಾತೆಯ ಮೊರೆ ಹೋದರು.

ಕಣ್ಣುನಮ್ಮ ಇಂದ್ರೀಯಗಳಲ್ಲಿ ಬಹುಮುಖ್ಯವಾದ ಅಂಗ ಹೇಗೋ ಹಾಗೆಯೇ ಆಧ್ಯಾತ್ಮ ಪ್ರಪಂಚದಲ್ಲಿ ಕಣ್ಣಿಗೆ ಬಹುಮುಖ್ಯವಾದ ಸ್ಥಾನವಿದೆ. ಮಾತು ಹೇಳಲಾಗದ ಎಷ್ಟೋ ಭಾವನೆಗಳನ್ನು ಅರ್ಥ ಮಾಡಿಕೊಳ್ಳಲು ಸದೃಢವಾದ ಮನಸ್ಸಿನ ಎಚ್ಚರ ಬೇಕಾಗುತ್ತದೆ. ಶ್ರೀಮಾತೆಯ ಕಣ್ಣಿನ ದೃಷ್ಟಿಯಿಂದ ಬೇಂದ್ರೆ ತಮ್ಮಲ್ಲಾದ ಅರಿವಿನ ಎಚ್ಚರವನ್ನು ಕವನದ ಮೂಲಕ ಹೇಳಿದ್ದಾರೆ. 'ಹಾಲು' ಮಗುವಿನ ದೈಹಿಕ ಹಾಗೂ ಮಾನಸಿಕ ಬೆಳವಣಿಗೆಗೆ ಬಹಳ ಮುಖ್ಯ. ಶ್ರೀಮಾತೆ ಬೇಂದ್ರೆಯವರ ಹೆತ್ತ ತಾಯಿಯಲ್ಲ. ಆದರೂ ಆಕೆ ಕಣ್ಣಿನ ನೋಟವೆಂಬ ಆಧ್ಯಾತ್ಮದ ಹಾಲನ್ನು ಬೇಂದ್ರೆ ಕೂಸಾಗಿ ಕುಡಿದಿದ್ದಾರೆ. ಆದ್ದರಿಂದಲೇ ಶ್ರೀಮಾತೆ ಬೇಂದ್ರೆಯ ಆಧ್ಯಾತ್ಮ ಮಾತೆ.

*"ನಿನ್ನ ನೋಟವೆ ಹಾಲು*

*ತಾಯ ನೀನು*

*ಕಂಗಳಿಂದಲೆ ಕುಡಿವೆ*

*ಕೂಸು ನಾನು "*[3]

(ಶ್ರೀ ಮಾತೃಶ್ರೀಗೆ)

ಶ್ರೀಮಾತೆ ತನ್ನ ನೋಟವನ್ನು ಹಾಲಾಗಿ ನೀಡಿ ಕಣ್ಣುಗಳಿಂದ ಮಾತನ್ನು ಕಲಿಸಿ ಬೇಂದ್ರೆಯವರ ಮನಸ್ಸನ್ನು ಆಧ್ಯಾತ್ಮ ಪ್ರಪಂಚಕ್ಕೆ ಹೋಗಲು ತಯಾರು ಮಾಡಿದ್ದಾರೆ. ಆಕೆ ಬೇಂದ್ರೆಗೆ ಆಧ್ಯಾತ್ಮ ಪ್ರಪಂಚಕ್ಕೆ ದಾರಿ ತೋರುವ ಕಣ್ಣೇ ಆಗಿದ್ದಾರೆ..

*ಕಂಗಳಿಂದಲೆ ನುಡಿವೆ*

*ತಾಯಿ ನೀನು*

*ನನ್ನ ಕಣ್ಣೇ ಕಿವಿಯು*

*ಕವಿಯು ನಾನು "[14]*

(ಶ್ರೀ ಮಾತೃಶ್ರೀಗೆ)

ಶ್ರೀಮಾತೆ ಕಣ್ಣುಗಳಿಂದ ನುಡಿದ ಮಾತುಗಳನ್ನು ಕಿವಿಯಲ್ಲಿ ಕೇಳಿ ಬೇಂದ್ರೆಯ ಕವಿ ಮನಸ್ಸು ಆಧ್ಯಾತ್ಮಿಕತೆಯನ್ನು ಹಾಡಿದ್ದು ಶ್ರೀಮಾತೆಯ ದೃಷ್ಟಿ ಬೇಂದ್ರೆಯವರ ಮೇಲೆ ಬಿದ್ದ ನಂತರವೇ . ಹೀಗೆ ಬೇಂದ್ರೆಯವರು ಶ್ರೀಮಾತೆಯ ಕಣ್ಣಿನ ನೋಟದಲ್ಲಿ ಆಧ್ಯಾತ್ಮಿಕತೆಯನ್ನು ಗುರ್ತಿಸಿರುವುದು ಒಂದು ವಿಶೇಷವಾಗಿದೆ.

ಮಾನವನ ಜೀವ ಸೃಷ್ಟಿಯಲ್ಲಿ ಆಧ್ಯಾತ್ಮಿಕತೆ ಎನ್ನುವುದು ಬೀಜರೂಪದಲ್ಲಿರುತ್ತದೆ. ಈ ಆಧ್ಯಾತ್ಮಿಕತೆ ಬಳ್ಳಿ ಬೆಳೆಯಬೇಕಾದರೆ ಬೀಜ ಮೊಳಕೆಯೊಡಯಲೇಬೇಕು. ಆದರೆ ಬೀಜವು ಮೊಳಕೆಯೊಡೆಯುವಂತೆ ಮಾಡುವವಳು ಶ್ರೀಮಾತೆ ಆಧ್ಯಾತ್ಮಿಕತೆಯ ಬೀಜ ಮೊಳಕೆಯೊಡೆದು ಜೀವರಸವು ಚಿಮ್ಮುವಂತೆ ಮಾಡುವ ಶಕ್ತಿ ಶ್ರೀಮಾತೆಯಲ್ಲಿದೆ ಎಂದು ಬೇಂದ್ರೆಯವರು ಅಭಿಪ್ರಾಯಪಡುತ್ತಾರೆ. ಬೇಂದ್ರೆಯವರ ಪ್ರಕಾರ ಕಣ್ಣುಗಳಲ್ಲೇ ಜೀವಂತ ಜ್ಯೋತಿಯನ್ನು ಇಟ್ಟುಕೊಂಡ ಆ ತಾಯಿ ನೇತ್ರಗಳು ಜೀವಂತ ಜ್ಯೋತಿಯ ಒಡತಿ. ಆಕೆ ಈ ಆಧ್ಯಾತ್ಮಿಕ ಪ್ರಪಂಚದ ಬದುಕಿಗೆ ಆಕೆ ಈ ಆಧ್ಯಾತ್ಮಿಕ ಪ್ರಪಂಚದ ಬದುಕಿಗೆ ಮಣ್ಣಿನ ಹುಡಿಗಳನ್ನು ಕರೆದೊಯ್ಯುತ್ತಾಳೆ.

*'ಕರೆಯು ಬಂದಿದೆ ದೂರದಿಂದಲೆ ಬರಲಿ ಮುಂದಕೆ ಸಾಗಲಿ*

*ಏಳಿ ಹೊತ್ತಿನ ಪೀಳಿಗೆ*

*ಬಂತು ಬೆಳಕಿನ ಏಳಿಗೆ*

*ನೇತ್ರಗಳ ಜೀವಂತ ಜ್ಯೋತಿಯ ತಾಯಿ ಕರೆವಳು ಬಾಳಿಗೆ*

*ಏಳು-ಬಯಕೆಯ ಬಳ್ಳಿಯೇ"[15]*

(ಏಳು ಬಯಕೆಯ ಬಳ್ಳಿಯೆ)

ಬೇಂದ್ರೆ ಶ್ರೀಮಾತೆಯನ್ನು, ಆಕೆಯ ದಿವ್ಯತೆಯನ್ನು ಚೆನ್ನಾಗಿಯೇ ಅರಿತುಕೊಂಡಿದ್ದಾರೆ. ಪಾಂಡಿಚೆರಿಯ ಮದರ್ ಬೇಂದ್ರೆ ಪಾಲಿಗೆ ಎಲ್ಲೆಯಿಲ್ಲದ ಆಕಾಶದಂತೆ. ಆ ಆಕಾಶವನ್ನು ಹಾರುವ ಹಕ್ಕಿಯಾಗಿ ಮುಟ್ಟುವ ತವಕ ಬೇಂದ್ರೆಗೆ. ಆಕಾಶದಂತಹ ವ್ಯಕ್ತಿತ್ವವನ್ನು ಮುಟ್ಟಬೇಕೆಂದರೆ ಅದು ಸಾಹಸದ ಮಾತೇ ಸರಿ. ಪಾಂಡಿಚೆರಿಯ ಮದರ್ ತನ್ನ ಸಂತೋಷಕ್ಕೇನೋ ಎನ್ನುವಂತೆ ಬೇಂದ್ರೆಯನ್ನು ಹಕ್ಕಿಯನ್ನಾಗಿಸಿ ರೆಕ್ಕೆ ನೀಡಿ ಹಾರಲು ಅವಕಾಶ ಮಾಡಿಕೊಟ್ಟಿದ್ದಾರೆ. ಶ್ರೀಮಾತೆ ವಿಶಾಲವಾದ ಆಕಾಶವನ್ನು ಮುಟ್ಟಲು ಬೇಂದ್ರೆಗೆ ಅನುವು ಮಾಡಿಕೊಟ್ಟಿದ್ದಾರೆ. ಅಂದರೆ ಸ್ವತಃ ಪಾಂಡಿಚೆರಿಯ ಮದರ್ ತನ್ನನ್ನು ಒಳಗೊಂಡಂತೆ ವಿಶಾಲವಾದ ಗಗನದಂತಿರುವ ಈ ಆಧ್ಯಾತ್ಮಿಕ ಪ್ರಪಂಚವನ್ನು ಅರಿಯಲು ಬೇಂದ್ರೆಗೆ ಸಹಾಯ ಮಾಡಿದ್ದಾರೆ.

*"ಚಿಕ್ಕೆ ಬಾನಿನೊಳೊಂದು ಚುಕ್ಕೆ ನಾನೇ ತಾನು*

*ನಿನ್ನ ಹಿಗ್ಗಿಗೆ ನನ್ನ ಹಕ್ಕಿಗೊಳಿಸಿ*

*ಕೂಗೆಂದೆ ಹಾಡೊಂದು ಕಂಠ ಹೃದಯದೊಳಿಕ್ಕಿ*

*ಆಟಕ್ಕೆ ಗರಿ – ಮೈಯ ತೊಡಿಗೆ ಕೊಡಿಸಿ"*[6]

**(ಶ್ರೀ ತಾಯಿಗೆ)**

ಶ್ರೀಮಾತೆಯ ಇಂತಹ ವಿಶಾಲವಾದ ಆಧ್ಯಾತ್ಮಿಕ ಆಕಾಶದಲ್ಲಿ ಬೇಂದ್ರೆ ತಾನು ಎಷ್ಟೇ ದೂರವಿದ್ದರೂ ಶ್ರೀ ಮಾತೆಯ ಸಮೀಪವೇ ಇದ್ದೇನೆ ಎಂಬ ಭಾವವಿದೆ. ಅಂದರೆ ಒಂದಲ್ಲಾ ಒಂದು ದಿನ ಶ್ರೀಮಾತೆಯ ವ್ಯಕ್ತಿತ್ವವನ್ನು ಮುಟ್ಟೇ ಮುಟ್ಟುತ್ತೇನೆ ಎಂಬ ಆಶಾಭಾವನೆ ಇಲ್ಲಿ ಬೇಂದ್ರೆಗಿದೆ. ಇದರ ಜೊತೆಗೆ ಶ್ರೀಮಾತೆ ಭೌತಿಕವಾಗಿ ಎಷ್ಟೇ ದೂರವಿದ್ದರೂ ಆ ತಾಯಿ ತನ್ನ ಮನಸ್ಸಿನಲ್ಲಿಯೇ ಇರುವುದರಿಂದ ಆಕೆಗೆ ತಾನು ಹತ್ತಿರವಿದ್ದೇನೆ ಎನ್ನುವ ಅಪೂರ್ವವಾದ ಭಾವವೂ ಕೂಡ ಇಲ್ಲಿ ವ್ಯಕ್ತವಾಗಿದೆ.

*"ಹಾರುಹಕ್ಕಿಯ ತೆರದಿ ಬರುವೆ ಹಾರಯಿಸುತ್ತ*

*ನಿನ್ನ ನೀಲ ವಿಶಾಲ ಗಗನದಲ್ಲಿ*

*ತಾಯಿ ಎನಿತೇ ನೀನು ದೂರವಿದ್ದರು ಏನು?*

*ನನಗೆ ಎನಿಸುವೆ ನೀ ಸಮೀಪದಲ್ಲಿ"*[7]

(ಶ್ರೀ ತಾಯಿಗೆ)

ಗುಣಗಳ ಆಗರವಾದ ಶ್ರೀಮಾತೆ ಬೇಂದ್ರೆಯ ಜೀವರಥವನ್ನು ನಡೆಸುವ ಸಾರಥಿಯಾಗಿದ್ದಾರೆ. ಬೇಂದ್ರೆಯವರನ್ನು ಹೆಜ್ಜೆ ಹೆಜ್ಜೆಗೂ ತಿದ್ದಿ . ಸುಂದರ ಮೂರ್ತಿಯನ್ನಾಗಿದುವಲ್ಲಿ ಆಕೆಯ ಪಾತ್ರ ಹಿರಿಯದ್ದಾಗಿದೆ. ಬೇಂದ್ರೆಯಂತಹ ಚುಕ್ಕೆಯನ್ನು ಬೆಳಗುವ ತೇಜ ಪುಂಜ ಶ್ರೀ ಮಾತೆಯಾಗಿದ್ದಾರೆ. ಶ್ರೀಮಾತೆ ತನ್ನ ಆಧ್ಯಾತ್ಮದ ಹಾದಿಯಲ್ಲಿ ಬೇಂದ್ರೆಯವರನ್ನು ಜೊತೆಯಾಗಿ ಕರೆದುಕೊಂಡು ಹೋಗುತ್ತಿದ್ದಾರೆ.

***"ನೀ ತೇಜ ಪುಂಜ ನಾನೊಂದು ಚುಕ್ಕೆ ಬಸಿರುಕ್ಕಿ ಹೊರಗೆ ಬಿದ್ದೆ ಇನ್ನೂನು ಭ್ರಮಣ ನಡೆವಿಹುದು, ತುಸುವು ಹರೆದಿಲ್ಲ ಹುಟ್ಟು ನಿದ್ದೆ ಬಾನಗಲದಲ್ಲು ನನ್ನಗಲದಂತೆ ನನ್ನನ್ನು ಕೂಡಿಕೊಂಡು ಹೊರಟಿರುವ ಎತ್ತೊ ಬಿಡದೆನ್ನ, ನಿನ್ನ ಆ ರಥಕೆ ಹೂಡಿಕೊಂಡು"[8]***

(ತಾಯಿಗೆ ಪ್ರಾರ್ಥನೆ)

ಬಾನು ವಿಸ್ತಾರಕ್ಕೆ ವಿಶಾಲತೆಗೆ ಸಂಕೇತ ಅಂತಹ ವಿಸ್ತಾರವಾದ ಆಧ್ಯಾತ್ಮ ಎನ್ನುವ ಪ್ರಪಂಚದಲ್ಲಿ ಚಿಕ್ಕ ಚುಕ್ಕೆಯಾಗಿ ಬೇಂದ್ರೆ ಇದ್ದಾರೆ. ಆ ಶ್ರೀಮಾತೆ ತೇಜಪುಂಜವಾಗಿದ್ದಾರೆ. ಇಷ್ಟು ದೂರ ಆ ಕರುಣಾಳು ಬೆಳಕಿನೆಡೆಗೆ ಕೈ ಹಿಡಿದು ಬೇಂದ್ರೆಯವರನ್ನು ನಡೆಸಿದರೂ ಈ ಆಧ್ಯಾತ್ಮ ಪ್ರಪಂಚದಲ್ಲಿ ತಿಳಿದುಕೊಳ್ಳಬೇಕಾದದ್ದು ಇನ್ನೂ ಬಹಳ ಇರುವುದರಿಂದ ಚುಕ್ಕೆ ತೇಜಪುಂಜದ ಸುತ್ತ ಸುತ್ತುತ್ತಲೇ ಇದೆ. ಶ್ರೀ ಮಾತೆಗೂ ಇದರ ಅರಿವು ಇರುವುದರಿಂದಲೇ ಈ ಬಾನಿನ ವಿಸ್ತಾರದಲ್ಲೂ ಬೇಂದ್ರೆಯವರನ್ನು ಕೈ ಬಿಡದಂತೆ, ಅಗಲದಂತೆ, ದಾರಿ ತಪ್ಪಿಸದಂತೆ ಅಧ್ಯಾತ್ಮ ರಥದಲ್ಲಿ ಬೇಂದ್ರೆಯನ್ನು ಕೂಡಿಕೊಂಡು ಆ ತಾಯಿ ಹೊರಟಿದ್ದಾರೆ. 'ಇಂಥ ತಾಯಿಗೆ ತಾ ಹೊತ್ತಲೆಂದು ಬಂದಂಥ ಬತ್ತಿ ದೀಪಕ್ಕೆ ಬಾಗುವಂತೆ' ಬೇಂದ್ರೆಯವರು ಕೂಡ ಶರಣು ಹೋಗಿದ್ದಾರೆ.

ಈ ಜೀವನ ಪಯಣದ ಹಾದಿ ತುಂಬಾ ಕಷ್ಟಕರವಾದದ್ದು. ಇಂತಹ ಕಷ್ಟಕರವಾದ ಹಾದಿಯಲ್ಲಿ ಸಾಗಿದ ಮನುಷ್ಯನಿಗೆ ಈ ಜೀವನ ಸಾಕು ಎನಿಸುವುದು ಸಹಜ. ಜೀವನದ ಇಳಿ ವಯಸ್ಸಿನಲ್ಲಿ ಮನಸ್ಸು ದೇವರು ಆಧ್ಯಾತ್ಮದ ಕಡೆಗೆ ವಾಲುತ್ತದೆ. ಆದರೆ ಬೇಂದ್ರೆಯಂತಹ ಕವಿಗಳು ಆಧ್ಯಾತ್ಮಿಕತೆಯ ಕಡೆಗೆ ತಮ್ಮ ಇಳಿವಯಸ್ಸಿಗಿಂತ ಮುಂಚೆಯೇ ಆಕರ್ಷಿಸಲ್ಪಟ್ಟಿದ್ದರು. ಆಗ ಅವರು ಆಧ್ಯಾತ್ಮಿಕತೆಯನ್ನು ತಮ್ಮ ಸಾಹಿತ್ಯ ಜೀವನದಲ್ಲಿ ಅಳವಡಿಸಿಕೊಂಡರು. ಇದಕ್ಕೆ ಬೇಂದ್ರೆ ಕೂಡ ಹೊರತಾಗಿರಲಿಲ್ಲ. ಜೀವನದ ಕಷ್ಟಗಳಿಗೆ ಮಾನಸಿಕವಾಗಿ ಕುಗ್ಗಿದ ಬೇಂದ್ರೆಯ ಜೀವವು ಸಾವಿನ ಆಜ್ಞೆಗಾಗಿ ಕಾಯುತ್ತಿದ್ದಾರೆ.

*"ಮೈಗೇ ಮೈಯೇ ಜಡವೆನಿಸಿ*

*ಇಳಿಸಲೋ ಎನಿಸುವದು*

*ಜೀವವು ಆಜ್ಞೆಗೆ ಕಾಯುತ್ತ ತಾಯೀ*

*ನಿನ್ನನೆ ನೆನೆಸುವುದು"*[9]

(ಓ ತಾಯಿ)

ಇಂಥ ಸಂದರ್ಭದಲ್ಲಿ ಬೇಂದ್ರೆ ಶ್ರೀಮಾತೆಯನ್ನು ಸ್ಮರಿಸುತ್ತಿದ್ದಾರೆ. ಆಧ್ಯಾತ್ಮಿಕತೆಯನ್ನು ಅರಿಯಲು ಜೀವ ಕೊಟ್ಟ ತಾಯಿಯನ್ನು ತಮ್ಮ ಜೀವದ ಅಂತ್ಯದಲ್ಲೂ ಬೇಂದ್ರೆ ಸ್ಮರಿಸುತ್ತಿರುವುದನ್ನು ಗಮನಿಸಿದರೆ ಶ್ರೀಮಾತೆ ಅವರ ಪಾಲಿಗೆ ದೇವ ಮಾತೆಯೇ ಆಗಿದ್ದರು ಎಂದೆನಿಸುತ್ತದೆ.

ಒಟ್ಟಾರೆ ಬೇಂದ್ರೆಯವರ ಕಾವ್ಯವನ್ನು ನೋಡಿದಾಗ ಶ್ರೀಮಾತೆಯನ್ನು ಕುರಿತಾದ ಅವರ ಕವನಗಳ ಅಧ್ಯಯನವೇ ಒಂದು ಅಪೂರ್ವವಾದದ್ದು ಎನಿಸುತ್ತದೆ. ಮೀರಾ ಶ್ರೀ ಮಾತೆಯಾದ ದಿವ್ಯ ಜೀವನದ ವಿವರಗಳು ಸಾಮಾನ್ಯ ಮನುಷ್ಯನಿಗೆ ಆಶ್ಚರ್ಯವೆನಿಸುತ್ತದೆ. ಆದರೆ ಅದೇ ವಿವರಗಳು ಕವಿಗೆ ಕಾವ್ಯದ ವಸ್ತುವಾಗುತ್ತದೆ. ಕವಿ ಬೇಂದ್ರೆ ವಿಷಯದಲ್ಲಿ ಆದದ್ದೂ ಇದೇ. ಶ್ರಿಮಾತೆಯ ದಿವ್ಯಜೀವನವನ್ನು ತಮ್ಮ ಸಾಹಿತ್ಯದಲ್ಲಿ ತಂದದ್ದು ಅವರ ಹೆಗ್ಗಳಿಕೆಯೇ ಸರಿ. ಬೇಂದ್ರೆಯ ಕಾವ್ಯದಲ್ಲಿ ಶ್ರೀಮಾತೆಯ ವಿಸ್ತಾರವನ್ನು ಗಮನಿಸಿದರೆ ಅಷ್ಟರ ಮಟ್ಟಿಗೆ ಪಾಂಡಿಚೆರಿಯ ಈ ಮದರ್ ಬೇಂದ್ರೆಯವರಲ್ಲಿ ಪ್ರಭಾವಿಸಿರುವುದು ಸ್ಪಷ್ಟವಾಗಿ ತಿಳಿಯುತ್ತದೆ. ಬೇಂದ್ರೆಯವರ ಪಾಲಿಗೆ ಶ್ರೀಮಾತೆ ಎಲ್ಲಾ ಸಿದ್ಧಿಗಳ ಉದ್ಭವ ಶಕ್ತಿ, ದೇವಮಾತೆ ಎಲ್ಲಕ್ಕಿಂತ ಮಿಗಿಲಾಗಿ ಆಧ್ಯಾತ್ಮಮಾತೆ ಆಗಿದ್ದಾರೆ. ರಾಮಕೃಷ್ಣ ಪರಮಹಂಸ, ಶ್ರೀ ಅರವಿಂದರು, ಶ್ರೀಮಾತರು ಈ ಮೊದಲಾದ ಆಧ್ಯಾತ್ಮದ ಚೇತನಗಳು ನವೋದಯ ಕವಿಗಳ ಆದರ್ಶವಾಗಿದ್ದರು. ಇಂತಹ ಚೇತನಗಳನ್ನು ತಮ್ಮ ಸಾಹಿತ್ಯದಲ್ಲಿ ಪರೋಕ್ಷವಾಗಿ ಆ ಕವಿಗಳು ತಂದಿದ್ದರು. ಆದರೆ ಬೇಂದ್ರೆ ವಿಶಿಷ್ಟವಾದ ಕವಿ ಮನಸ್ಸನ್ನು ಹೊಂದಿದ್ದು ಅವರು ಶ್ರೀಮಾತೆ ಎಂಬ ಆದರ್ಶವನ್ನೇ ತಮ್ಮ ಕಾವ್ಯದ ಭಾಗವನ್ನಾಗಿ ತಂದರು. ಒಂದು ಆದರ್ಶವನ್ನೇ ಕೇಂದ್ರವಾಗಿಟ್ಟು ಸಾಹಿತ್ಯಕೃಷಿ ಮಾಡಲು ಹೆಚ್ಚಿನ ಪ್ರತಿಭೆ ಬೇಕು. ಅಂತಹ ಪ್ರತಿಭೆ ನಮ್ಮ ಕವಿ ಬೇಂದ್ರೆಯವರದು ಎನ್ನುವುದು ನಮ್ಮ ಹೆಗ್ಗಳಿಕೆ.

# ಸಮಾರೋಪ

ಬೇಂದ್ರೆಯವರ ಸಾಹಿತ್ಯದಲ್ಲಿ ಅದರಲ್ಲೂ ಕಾವ್ಯದಲ್ಲಿ 'ಮಾತೃ' ಪ್ರತಿಮೆ ಒಂದು ಕೇಂದ್ರಬಿಂದುವಾಗಿದೆ. ಬೇಂದ್ರೆಯವರದು ಸ್ತ್ರೀಪೋಷಿತ ಬಾಲ್ಯವಾದ್ದರಿಂದ. ಮುಂದೆ ತಮ್ಮ ಕಾವ್ಯ ಜೀವನದಲ್ಲೂ ಈ 'ತಾಯಿ' ಪ್ರತಿಮೆ ಬಿಡದ ನಂಟಾಗಿ ಅಂಟಿಕೊಂಡು ಹೇಗೆ ಬಂದಿದೆ ಎಂಬುದು ಈ ಹಿಂದಿನ ಅಧ್ಯಾಯಗಳಲ್ಲಿ ಚರ್ಚೆ ಮಾಡಲಾಗಿದೆ. ಬೇಂದ್ರೆಯ ಕಾವ್ಯವು ಅವರ ತಾಯಿಯ ಹೃದಯದಲ್ಲಿ ಸೃಷ್ಟಿಯಾಗುತ್ತದೆ. ವಸ್ತು ಯಾವುದೇ ಇದ್ದರೂ ಅದು ಕೊನೆಗೆ ಬಂದು ಮುಟ್ಟುವುದು ತಾಯಿಯನ್ನೇ. ಅನೇಕ ರೂಪ ಮತ್ತು ಬಗೆಗಳಲ್ಲಿ ಮಾತೃತ್ವವು ಬೇಂದ್ರೆ ಕಾವ್ಯದಲ್ಲಿ ಮೂಡಿ ಬಂದಿದೆ. ಈ ಅಂಶವನ್ನು ಸಹ ಹಿಂದಿನ ಅಧ್ಯಾಯಗಳಲ್ಲಿ ಚರ್ಚಿಸಲಾಗಿದೆ.

"ಮಾತೃ ಪ್ರತಿಮೆ ಎಂಬುದು ನಮ್ಮ ಧರ್ಮ ಮತ್ತು ಸಂಸ್ಕೃತಿಯಲ್ಲಿ ಹಾಸು ಹೊಕ್ಕಾಗಿದೆ. ಇದರಿಂದಾಗಿ ಬೇಂದ್ರೆಯವರಲ್ಲಿ ಮಾತೃಪ್ರತಿಮೆ ಮೂಡಲು ಸಹಾಯ ಮಾಡಿದೆ. "ಅನೇಕ ರೂಪಗಳಲ್ಲಿ ವಿಧಗಳಲ್ಲಿ ತಾಯಿ ತತ್ವ ಬೇಂದ್ರೆಯವರ ಸೃಜನಶೀಲ ವ್ಯಕ್ತಿತ್ವವನ್ನು ಕ್ರಿಯಾಶೀಲವನ್ನಾಗಿ ಮಾಡಿದೆ. ಈ ತಾಯಿ ತತ್ವದ ಮುಖ್ಯ ನೆಲೆಗಳು ಎಂದರೆ ತುಂಬು ಪ್ರೀತಿ ಮತ್ತು ರಕ್ಷಕತೆ ಭಾರತೀಯ ಸಂಸ್ಕೃತಿಯನ್ನು ಆಧಾರ ಸ್ತಂಭಗಳಲ್ಲೊಂದು. ಭಾರತೀಯ ಮನಸ್ಸಿನ ಮೇಲೆ ಅತ್ಯಂತ ಆಳವಾದ ಪರಿಣಾಮ ಬೀರಿರುವ ಈ ತತ್ವ ಅಭಿವ್ಯಕ್ತಿಯನ್ನು ಭಾರತೀಯ ಬದುಕಿನ ಎಲ್ಲ ಮುಖಗಳಲ್ಲಿ ಕಾಣಬಹುದು. ಧರ್ಮ ಮತ್ತು ಕಲೆಗಳಲ್ಲಿ ಈ ತಾಯಿ ತತ್ವ ಎಂಬುದು ಒಂದು ರೀತಿಯ ಮೂಲ ಪ್ರತಿಮೆಯಾಗಿ ಹೋಗಿದೆ ಎಂದರೂ ಸಲ್ಲುತ್ತದೆ. ಭಾರತೀಯ ಮನಸ್ಸು ಅತ್ಯಂತ ಉತ್ಕಟವಾಗಿ ಪ್ರತಿಸ್ಪಂದಿಸುವುದು ಈ ತಾಯಿ ತತ್ವದ ವಿವಿಧ ಅಭಿವ್ಯಕ್ತಿಗಳಿಗೆ"[1].

ಮಾತೃ ಪ್ರತಿಮೆಯನ್ನು ಕನ್ನಡ ಸಾಹಿತ್ಯದಲ್ಲಿ ಬೇಂದ್ರೆಯವರಷ್ಟು ಆಗಾಧವಾಗಿ, ಸಮರ್ಥವಾಗಿ ಬಳಸಿದ ಕವಿ ಮತ್ತೊಬ್ಬರಿಲ್ಲ. ಬೇರೆ ಕವಿಗಳು ತಮ್ಮ ಒಂದೆರಡು ಕವನಗಳಲ್ಲಿ ಈ ಪ್ರತಿಮೆಯನ್ನು ಬಳಸುತ್ತಾರೆ. ಆದರೆ ಬೇಂದ್ರೆ ತಮ್ಮ ಅನೇಕ ಕವನಗಳಲ್ಲಿ ಈ ಮಾತೃ ಪ್ರತಿಮೆಯನ್ನು ಮತ್ತೆ ಮತ್ತೆ ಸಮರ್ಥವಾಗಿ ಬಳಸಿದ್ದಾರೆ. ತಾಯಿ ಅಂಬಿಕೆ ಬೇಂದ್ರೆಯವರ ಪಾಲಿಗೆ ಕೇವಲ ಹೆತ್ತತಾಯಿಯಲ್ಲ. ಬದಲಿಗೆ ಆಕೆ ಬೇಂದ್ರೆಗೆ ಅರಿವಿನ ಮೂರ್ತಿ ಮತ್ತು ಅಲೌಕಿಕತೆಯ ದರ್ಶನ ಮಾಡಿಸುವ ದೇವತೆ. ಇಂಥ ತಾಯಿಯ ಮುಂದುವರಿಕೆಯೆನೋ ಎಂಬಂತೆ ಭೂಮಿ, ಭಾರತ, ಕನ್ನಡ, ವಿಶ್ವ, ಧಾರವಾಡ ಇವೆಲ್ಲಾ ಆ ತಾಯಿಯ ರೂಪ ಸಾಕಾರವನ್ನು ಪಡೆದಿದೆ. ಕೊನೆಗೆ ಪಾಂಡಿಚೇರಿಯ 'ಮದರ್'ನಲ್ಲಿಯೂ ತಾಯಿಯನ್ನೇ ಕಂಡು ಆಕೆಯನ್ನು ಆಧ್ಯಾತ್ಮದ ಲೋಕಕ್ಕೆ ದಾರಿ ತೋರಿಸುವ ತಾಯಿಯೆಂದೇ ಪರಿಗಣಿಸಿದ್ದಾರೆ.

ಬೇಂದ್ರೆಯವರ ಕಾವ್ಯದ ವಸ್ತು ಯಾವುದೇ ಆಗಿದ್ದರೂ ಅಲ್ಲೆಲ್ಲ ಮನುಷ್ಯನ ಉಸಿರಾಟದ ಸದ್ದು ಕೇಳಿಸುತ್ತದೆ. ಇಲ್ಲಿ ವಸ್ತುಗಳು ಕೇವಲ ಜಡವಸ್ತುವಾಗಿರದೆ, ಜೀವಂತ ಮೂರ್ತಿಯಾಗುತ್ತದೆ. ಜೀವಂತ ಮೂರ್ತಿಯಾಗುವುದು ಬೇಂದ್ರೆಯವರ ಬಹುತೇಕ ಕವನಗಳಲ್ಲಿ ಹೆಣ್ಣು ಹೊರತು ಗಂಡಲ್ಲ. ಹೆಣ್ಣನ್ನು ಬೇಂದ್ರೆ 'ಮಾತೆ' ಎನ್ನುವ ಮೂಲಕ ಒಂದು ವಿಶಿಷ್ಟವಾದ ಅನುಭವವನ್ನು ಮೂಡಿಸುತ್ತಾರೆ. ಯಾವಾಗ ಬೇಂದ್ರೆ ಪ್ರತಿಯೊಂದು ವಸ್ತುವಿನಲ್ಲೂ 'ಮಾತೆ' ಯನ್ನು ಕಾಣುತ್ತಾರೋ ಆಗ ಆ ವಸ್ತುವೆಲ್ಲಾ ತನ್ನ ಜಡತ್ವವನ್ನು ಕಳೆದುಕೊಂಡು ಮಾತೃಸ್ವರೂಪಿಯಾಗಿ ಕಂಗೊಳಿಸುತ್ತದೆ. ಉದಾಹರಣೆಗೆ ದೇಶದಂತಹ ಜಡ ವಸ್ತುವಿಗೆ ಬೇಂದ್ರೆ 'ಮಾತೆ' ಎಂಬ ಕಲ್ಪನೆಯನ್ನು ಆರೋಪಿಸುತ್ತಾರೆ. ಅಲ್ಲಿಯವರೆಗೂ ಜಡವಾಗಿದ್ದ ದೇಶವು 'ಮಾತೆ'ಯ ಸ್ಪರ್ಶ ಪಡೆದ ತಕ್ಷಣ ತಾಯಿ–ಮಕ್ಕಳ ಸಂಬಂಧವು ಅಲ್ಲಿ ಉಂಟಾಗುತ್ತದೆ.

ಬೇಂದ್ರೆಯವರು ತಮ್ಮ ಬಾಲ್ಯದಿಂದಲೂ ಅಜ್ಜಿ, ತಾಯಿಯಂತಹ ಸ್ತ್ರೀ ಶಕ್ತಿಗಳ ಪೋಷಣೆಯಲ್ಲಿ ಬೆಳೆದಿದ್ದರಿಂದ ಹೆಣ್ಣನ್ನು ಕೇವಲ ಹೆಣ್ಣಾಗಿ ನೋಡಲು ಸಾಧ್ಯವೇ ಆಗಿಲ್ಲ. ಆದ್ದರಿಂದಲೇ ಬೇಂದ್ರೆಯವರ ಬಹುತೇಕ ಕವನಗಳಲ್ಲಿ ಮಾತೃಪ್ರತಿಮೆಯು ಸಹಜವಾಗಿಯೇ ಮೂಡಿ ಬಂದಿದೆ. "ತಾಯಿ, ಮಾಯಿ ಅಂಬಿಕೆಯೇ ನಿನ್ನ ತನಯ ದತ್ತನು ನೀನು ಇತ್ತು ದಿತ್ತನು" ಎಂದು ಬೇಂದ್ರೆಯವರು ನುಡಿದುದು ಕೇವಲ ಕವನಕ್ಕಾಗಿ ಜೋಡಿಸಿದ ಮಾತುಗಳಲ್ಲ. ತಾಯಿ ಅಂಬಾಬಾಯಿ ತನ್ನ ಮಗನ ಮನದಲ್ಲಿ ನಿಂತುದರ ಪರಿಣಾಮವಾಗಿ ಮೂಡಿ ಬಂದದ್ದಾಗಿದೆ. ಬೇಂದ್ರೆಯವರ ಕಾವ್ಯದಲ್ಲಿ ಮೂಡಿಬಂದ ಮಾತೃತ್ವದ ಸ್ವರೂಪವನ್ನು ಗಮನಿಸಿಯೇ ಕೀರ್ತಿನಾಥ ಕುರ್ತುಕೋಟಿಯವರು "ಬೇಂದ್ರೆಯವರ ಕಾವ್ಯ ಪ್ರತಿಭೆಯ ಉಗಮ ಅವರ ತಾಯಿಯ ಹೃದಯದಲ್ಲಿ, ಆದರೆ ಧಾರವಾಡದ ಶಾಲ್ಮಲೆಯ ಉಗಮದಂತೆ ಅದೂ ಕಣ್ಣಿಗೆ ಕಾಣುವುದಿಲ್ಲ" ಎಂದಿದ್ದಾರೆ. ಬೇಂದ್ರೆಯವರ ವ್ಯಕ್ತಿತ್ವವು ತಾಯಿ ಅಂಬಾಬಾಯಿಯಿಂದ ರೂಪುಗೊಂಡಿದೆ. ಆಕೆಯ ವಾತ್ಸಲ್ಯ, ಪ್ರೀತಿಯು ಕವಿ ಬೇಂದ್ರೆಯ ಕಾವ್ಯ ಜೀವನದಲ್ಲೂ ಪ್ರಭಾವಿಸಿದೆ. ಬೇಂದ್ರೆಯ ತಾಯಿ ಅಂಬಾಬಾಯಿ ಬೇಂದ್ರೆಗೆ ಕೇವಲ ಜನ್ಮ ನೀಡಿದ ತಾಯಿಯಲ್ಲ. ಕೇವಲ ವಾತ್ಸಲ್ಯ ಮೂರ್ತಿಯೂ ಅಲ್ಲ. ಜೊತೆಗೆ ಆಕೆ ಅರಿವಿನ ಮೂರ್ತಿಯೂ ಹೌದು. ಬೇಂದ್ರೆಯವರ ಜೀವನದಲ್ಲಿ ಇಷ್ಟೆಲ್ಲಾ ಪಾತ್ರಗಳನ್ನು ಅವರ ತಾಯಿ ವಹಿಸಿದ್ದರಿಂದಲೇ ಅವರ ಕಾವ್ಯದ ಕೇಂದ್ರ ಪ್ರತೀಕಗಳಲ್ಲಿ 'ಮಾತೆ'ಯೂ ಕೂಡ ಒಂದಾಗಿ ನಿಲ್ಲುತ್ತದೆ.

ಇಂತಹ ಮಾತೃತ್ವದ ಕಲ್ಪನೆಯೇ ಅವರ ಇಡೀ ಕಾವ್ಯವನ್ನು ಬೆಸೆದಿದೆ. ಜೊತೆಗೆ ಬೇಂದ್ರೆಯವರ ತಾಯಿಯೇ ಬೇಂದ್ರೆಯವರಲ್ಲಿ ಆದರ್ಶ, ಮಾನವೀಯತೆ ಮೊದಲಾದ ನೈತಿಕಗುಣಗಳು ಬೆಳೆಯಲು ಸಹಾಯ ಮಾಡಿದರು. ಇದನ್ನು ಬೇಂದ್ರೆಯವರೇ ಹೀಗೆ ದಾಖಲಿಸಿದ್ದಾರೆ. "ನನಗೆ ನೈತಿಕ ಮೊದಲಾದ ಆದರ್ಶ ಎಂಬುದೇನೂ ಇಲ್ಲ ಎಂದೆ. ಆದರೆ ನನ್ನ ತಾಯಿ ನನ್ನನ್ನು ಕಾಪಾಡುತ್ತಿದ್ದಾಳೆ. ತಾಯಿಗೆ ಕೆಡಕೆನಿಸುವಂಥ ಯಾವುದನ್ನೂ ಮಾಡಬಾರದೆಂದು ನನ್ನ ಆತ್ಮ ಎಚ್ಚರವಾಗಿರುತ್ತದೆ. ತಾಯಿ ಎಂಬ ಸೂತ್ರದಲ್ಲೇ ನನ್ನ ಜೀವನ ಪೋಣಿಸಿದೆ. ನನ್ನ ತಾಯಿ 'ಧಾರವಾಡದ ತಾಯಿ', 'ಕನ್ನಡ ತಾಯಿ', 'ಭಾರತ ಮಾತೆ' ನಂತರ ಇದೀಗ ಅರವಿಂದಾಶ್ರಮದ 'ಮದರ್' ಹೀಗೆ ಮಾತೃಪ್ರೇಮದ ಆಕಾರ, ವಿಕಾರ, ಪ್ರಕಾರಗಳಿಂದ ನನ್ನ ಕಾವ್ಯ ಓತಪ್ರೋತವಾಗಿದೆ'.[2]

ಒಟ್ಟಾರೆ ಮಾತೃ ಪ್ರತಿಮೆ ಬೇಂದ್ರೆ ಕಾವ್ಯದಲ್ಲಿ ವಿಶಾಲವಾದ ಹರಿವು ಪಡೆದುಕೊಂಡಿದೆ. ತಾಯಿ-ಮಗುವಿನ ಮಧುರ ಸಂಬಂಧದ ಭಾವವು ಬೇಂದ್ರೆಯವರಲ್ಲಿ ಇಷ್ಟು ಮಟ್ಟಿಗೆ ಪ್ರಭಾವ ಬೀರಿರುವುದು ಗಮನಿಸಿದರೆ ಆಶ್ಚರ್ಯವಾಗುತ್ತದೆ. ಈ ಮೂಲಕ ಕನ್ನಡ ಸಾಹಿತ್ಯಕ್ಕೆ ವಿಶಿಷ್ಟ ಕೊಡುಗೆಯನ್ನು ಬೇಂದ್ರೆಯವರು ನೀಡಿದ್ದಾರೆ.

## ಸಂಖ್ಯಾ ಟಿಪ್ಪಣಿಗಳು :

### ಅಧ್ಯಾಯ ಒಂದು

1. ವಾಮನ ಬೇಂದ್ರೆ : ಬೇಂದ್ರೆ ಜೀವನ ಪರಿಚಯ, ಪುಟ 94
2. ದ.ರಾ.ಬೇಂದ್ರೆ : ಗಂಗಾವತರಣ ಪುಟ 13
3. ದ.ರಾ.ಬೇಂದ್ರೆ : ಸಾಹಿತ್ಯದ ವಿರಾಟ ಸ್ವರೂಪ ಪುಟ 50
4. ಡಾ॥ ಎಂ.ಬಸವಣ್ಣ : ಯೂಂಗನ ಮನೋವೈಜ್ಞಾನಿಕ ಸಿದ್ಧಾಂತಗಳು ಪುಟ – 19
5. ದ.ರಾ.ಬೇಂದ್ರೆ : ಅರಳು ಮರಳು ಪುಟ – 131
6. ದ.ರಾ.ಬೇಂದ್ರೆ : ಸಾಹಿತ್ಯದ ವಿರಾಟ ಸ್ವರೂಪ ಪುಟ – 117
7. ದ.ರಾ.ಬೇಂದ್ರೆ : ಅರಳು ಮರಳು : ಪುಟ – 149

### ಅಧ್ಯಾಯ ಎರಡು

1. ಜನಪದ ತ್ರಿಪದಿ
2. ಹಲಸಂಗಿ ಗೆಳೆಯರು : ಗರತಿಯ ಹಾಡು ಪುಟ–35
3. ದ.ರಾ.ಬೇಂದ್ರೆ : ಸಾಹಿತ್ಯದ ವಿರಾಟ ಸ್ವರುಪ ಪುಟ–52
4. ದ.ರಾ.ಬೇಂದೆ : ಗಂಗಾವತರಣ ಪುಟ–15
5. ದ.ರಾ.ಬೇಂದ್ರೆ : ಸಾಹಿತ್ಯದ ವಿರಾಟ್ ಸ್ವರೂಪ ಪುಟ–50
6. ವಾಮನ ಬೇಂದ್ರೆ: ಅಂಬಿಕಾತನಯದತ್ತರ ಸಮಗ್ರ ಕಾವ್ಯ ವಿಕಾಸ ಸಂಪುಟ3 ಪುಟ–62
7. ದ.ರಾ.ಬೇಂದ್ರೆ ಮತ್ತೆ ಶ್ರಾವಣ ಬಂತು: ಪುಟ–4
8. ದ.ರಾ.ಬೇಂದ್ರೆ ಸಂಚಯ : ಪುಟ–63
9. ದ.ರಾ.ಬೇಂದ್ರೆ : ಸಂಚಯ : ಪುಟ–63
10. ಕೀರ್ತಿನಾಥ ಕುರ್ತಕೋಟಿ : ಬಾರೋ ಸಾಧನ ಕೇರಿಗೆ ಪುಟ–7
11. ದ.ರಾ.ಬೇಂದ್ರೆ : ಬಾಲ ಬೋಧೆ : ಪುಟ–12
12. ದ.ರಾ.ಬೇಂದ್ರೆ : ಸಾಹಿತ್ಯದ ವಿರಾಟ ಸ್ವರೂಪ : ಪುಟ–45
13. ದ.ರಾ.ಬೇಂದ್ರೆ : ಮತ್ತೆ ಶ್ರಾವಣ ಬಂತು : ಪುಟ–3
14. ದ.ರಾ.ಬೇಂದ್ರೆ : ಉಯ್ಯಾಲೆ : ಪುಟ–93
15. ವಾಮನ ಬೇಂದ್ರೆ : ಅಂಬಿಕಾತನಯದತ್ತರ ಸಮಗ್ರ ಕಾವ್ಯವಿಕಾಸ ಸಂಪುಟ3 ಪುಟ–428
16. ಅಂಬಿಕಾತನಯದತ್ತ : ಗಂಗಾವತರಣ ಪುಟ–14
17. ದ.ರಾ.ಬೇಂದ್ರೆ : ನಾದಲೀಲೆ ಪುಟ–63
18. ಅಂಬಿಕಾತನಯದತ್ತ : ಗಂಗಾವತರಣ : ಪುಟ–10

19. ದ.ರಾ.ಬೇಂದ್ರೆ : ನಾದಲೀಲೆ : ಪುಟ–19
20. ಲಂಕೇಶ್ : ಸಾಹಿತ್ಯನಂದನ : ಪುಟ–47
21. ದ.ರಾ.ಬೇಂದ್ರೆ : ಅರಳು ಮರಳು : ಪುಟ–78
22. ದ.ರಾ.ಬೇಂದ್ರೆ : ಸಾಹಿತ್ಯದ ವಿರಾಟ್ ಸ್ವರೂಪ : ಪುಟ–85
23. ದ.ರಾ.ಬೇಂದ್ರೆ : ಅರಳು ಮರಳು : ಪುಟ–78
24. ಜಿ.ಎಸ್.ಶಿವರುದ್ರಪ್ಪ : ಸಮಗ್ರ ಕಾವ್ಯ : ಪುಟ–23
25. ಜಿ.ಎಸ್.ಶಿವರುದ್ರಪ್ಪ : ಸಮಗ್ರ ಕಾವ್ಯ : ಪುಟ–24
26. ಜಿ.ಎಸ್.ಶಿವರುದ್ರಪ್ಪ : ಸಮಗ್ರ ಕಾವ್ಯ : ಪುಟ–25
27. ದ.ರಾ.ಬೇಂದ್ರೆ : 1963 (ಡಿಸೆಂಬರ್): ಕಸ್ತೂರಿ ಸಂದರ್ಶನ

## ಅಧ್ಯಾಯ ಮೂರು

1. ಜಿ. ಹನುಮಂತರಾವ್ : "ಋಗ್ವೇದ ಸೂಕ್ತಗಳು' ಪುಟ 90.
2. ಎಲ್. ಎಸ್. ಶೇಷಗಿರಿರಾವ್: ಹೊಸಗನ್ನಡ ಸಾಹಿತ್ಯ ಪುಟ 10
3. ಅಂಬಿಕಾತನಯದತ್ತ : ನಮನ ಪುಟ 14
4. ಅಂಬಿಕಾತನಯದತ್ತ : ನಮನ ಪುಟ 17
5. ಅಂಬಿಕಾತನಯದತ್ತ : ನಮನ ಪುಟ 17
6. ಅಂಬಿಕಾತನಯದತ್ತ : ನಮನ ಪುಟ 17
7. ಡಾ॥ ಜಿ.ಎಸ್. ಅಮೂರ : ದತ್ತಾತ್ರೇಯ ರಾಮಚಂದ್ರ ಬೇಂದ್ರೆ ಪುಟ 63
8. ಅಂಬಿಕಾತನಯದತ್ತ : ನಾದಲೀಲೆ ಪುಟ 25
9. ದ.ರಾ. ಬೇಂದ್ರೆ : ಬಾ ಹತ್ತರ ಪುಟ 147
10. ವಾಮನಬೇಂದ್ರೆ : ಅಂಬಿಕಾತನಯದತ್ತರ ಸಮಗ್ರ ಕಾವ್ಯ ವಿಕಾಸ ಸಂಪುಟ2 ಪುಟ300
11. ವಾಮನಬೇಂದ್ರೆ : ಅಂಬಿಕಾತನಯದತ್ತರ ಸಮಗ್ರ ಕಾವ್ಯ ವಿಕಾಸ ಸಂಪುಟ2 ಪುಟ 25
12. ದ.ರಾ.ಬೇಂದ್ರೆ : ವಿನಯ ಪುಟ 21
13. ದ.ರಾ.ಬೇಂದ್ರೆ : ವಿನಯ ಪುಟ 21
14. ದ.ರಾ.ಬೇಂದ್ರೆ : ವಿನಯ ಪುಟ 19
15. ದ.ರಾ.ಬೇಂದ್ರೆ : ವಿನಯ ಪುಟ 20
16. ದ.ರಾ.ಬೇಂದ್ರೆ : ವಿನಯ ಪುಟ 20
17. ಕುವೆಂಪು : ಪಾಂಚಜನ್ಯ ಪುಟ 27
18. ಕುವೆಂಪು : ಪಾಂಚಜನ್ಯ ಪುಟ 32
19. ಕೆ.ಎಸ್. ನರಸಿಂಹಸ್ವಾಮಿ : ಶಿಲಾಲತೆ ಪುಟ 82
20. ಕೆ. ಎಸ್. ನರಸಿಂಹಸ್ವಾಮಿ : ಆಯ್ದಕವನಗಳು ಪುಟ 90
21. ಮಧುರ ಚೆನ್ನ : ನನ್ನ ನಲ್ಲ ಪುಟ 47
22. ಜಿ.ಎಸ್. ಕಾಪಸೆ : ಇಲ್ಲಿಂದ ಉದ್ಧೃತ ಪುಟ 219
23. ಬಿ. ವಿ. ಕೆದಿಲಾಯ : ಗೋಪಾಲಕೃಷ್ಣ ಅಡಿಗ ಪುಟ 64

24. ಗೋಪಾಲಕೃಷ್ಣ ಅಡಿಗ : ಮುನ್ನುಡಿ :
ನಡೆದುಬಂದ ದಾರಿ
25. ಗೋಪಾಲಕೃಷ್ಣ ಅಡಿಗ : ಭೂಮಿಗೀತ ಪುಟ 17
26. ಗೋಪಾಲಕೃಷ್ಣ ಅಡಿಗ : ಭೂಮಿಗೀತ ಪುಟ. 23
27. ದ. ರಾ . ಬೇಂದ್ರೆ : ನಾದಲೀಲೆ ಪುಟ 88

## ಅಧ್ಯಾಯ ನಾಲ್ಕು

1. ಬಿ.ಎಂ.ಶ್ರೀ : ಇಂಗ್ಲೀಷ್ ಗೀತೆಗಳು: ಪುಟ 16 (XVI)
2. ಡಿ.ಆರ್.ನಾಗರಾಜ್ : ಶಕ್ತಿ ಶಾರದೆಯ ಮೇಳ ಪುಟ 67
3. ದ.ರಾ. ಬೇಂದ್ರೆ : ನಮನ ಪುಟ 16
4. ವಾಮನಬೇಂದ್ರೆ : ಅಂಬಿಕಾತನಯದತ್ತರ ಸಮಗ್ರ ಕಾವ್ಯ ವಿಕಾಸಸಂಪುಟ2 ಪುಟ376
5. ವಾಮನಬೇಂದ್ರೆ : ಅಂಬಿಕಾತನಯದತ್ತರ ಸಮಗ್ರ ಕಾವ್ಯ ವಿಕಾಸ ಸಂಪುಟ2 ಪುಟ 332
6. ವಾಮನಬೇಂದ್ರೆ : ಅಂಬಿಕಾತನಯದತ್ತರ ಸಮಗ್ರ ಕಾವ್ಯ ವಿಕಾಸ ಸಂಪುಟ2 ಪುಟ 317
7. ವಾಮನಬೇಂದ್ರೆ : ಅಂಬಿಕಾತನಯದತ್ತರ ಸಮಗ್ರ ಕಾವ್ಯ ವಿಕಾಸ ಸಂಪುಟ2 ಪುಟ 318
8. ದ.ರಾ. ಬೇಂದ್ರೆ : ಅರಳು ಮರಳು ಪುಟ 60
9. ದ.ರಾ. ಬೇಂದ್ರೆ : ಪರಾಕಿ ಪುಟ 23
10. ದ.ರಾ. ಬೇಂದ್ರೆ ಅರಳು ಮರಳು ಪುಟ 120
11. ಕುವೆಂಪು ನೆನಪಿನ ದೋಣಿಯಲ್ಲಿ ಪುಟ 897
12. ಕುವೆಂಪು ಪಾಂಚಜನ್ಯ : ಪುಟ 6
13. ನವೋದಯ ಜಿ.ಎಸ್. ಶಿವರುದ್ರಪ್ಪ ಪುಟ 80
14. ದ.ರಾ. ಬೇಂದ್ರೆ ಗರಿ : ಪುಟ 49

## ಅಧ್ಯಾಯ ಐದು

1. ಶ್ರೀನಿವಾಸ ಮಂಗಳವೇಡೆ ಮತ್ತು ನಾರಾಯಣ ಸಂಗಮ : ಕರ್ನಾಟಕ ಏಕೀಕರಣ : ಪುಟ 9
2. ಭೀ.ಗು. ಕುಲಕರ್ಣಿ : ಕರ್ನಾಟಕ ವಿದ್ಯಾವರ್ಧಕ ಸಂಘ : ಅಷ್ಟದಶಕಗಳ ಬೆಳಕು : ವಾಗ್ಭೂಷಣ ಪುಟ 187.
3. ದ.ರಾ.ಬೇಂದ್ರೆ : ಸಾಹಿತ್ಯದ ವಿರಾಟ ಸ್ವರೂಪ ಪುಟ 634
4. ಚುಳಕಿ ಗೋವಿಂದರಾಯರು (ಸಂ) ಕವಿವರ ಬೇಂದ್ರೆ, ಪುಟ 15, 16.
5. ದ.ರಾ. ಬೇಂದ್ರೆ : ನಾದಲೀಲೆ, ಪುಟ 92.

6. ವಾಮನಬೇಂದ್ರೆ : ಅಂಬಿಕಾತನಯದತ್ತರ ಸಮಗ್ರ ಕಾವ್ಯ
ವಿಕಾಸ ಸಂಪುಟ 2 ಪುಟ 413.

7. ವಾಮನಬೇಂದ್ರೆ : ಅಂಬಿಕಾತನಯದತ್ತರ ಸಮಗ್ರ ಕಾವ್ಯ
ವಿಕಾಸ ಸಂಪುಟ 2. ಪುಟ 374.

8. ದ.ರಾ. ಬೇಂದ್ರೆ ಸಾಹಿತ್ಯದ ವಿರಾಟ ಸ್ವರೂಪ ಪುಟ 149.

9. ದ.ರಾ. ಬೇಂದ್ರೆ : ಗಂಗಾವತರಣ ಪುಟ 37.

10. ಸಿ.ಆರ್.ಗೋವಿಂದರಾಜು:ಕರ್ನಾಟಕದ ಏಕೀಕರಣ ಚಳುವಳಿ
ಮತ್ತು ಕನ್ನಡ ಸಾಹಿತ್ಯ ಪುಟ 136.

11. ಕಾ.ವೆಂ. ಶ್ರೀನಿವಾಸಮೂರ್ತಿ : ಕನ್ನಡ ಸಾಹಿತ್ಯ ಮತ್ತು ಕರ್ನಾಟಕತ್ವ
ಪುಟ : 77

**ಅಧ್ಯಾಯ ಆರು**

1. ಕೊ.ಚೆ : ಚೈತನ್ಯ ಮಯಿ ಶ್ರೀಮಾತಾ ಪುಟ–9
2. ಕೊ.ಚೆ : ಚೈತನ್ಯ ಮಯಿ ಶ್ರೀಮಾತಾ ಪುಟ–31
3. ಕೊ.ಚೆ : ಚೈತನ್ಯ ಮಯಿ ಶ್ರೀಮಾತಾ ಪುಟ–36
4. ಕೊ.ಚೆ : ಚೈತನ್ಯ ಮಯಿ ಶ್ರೀಮಾತಾ ಪುಟ–150
5. ಕೊ.ಚೆ : ಚೈತನ್ಯ ಮಯಿ ಶ್ರೀಮಾತಾ ಪುಟ–2
6. ದ.ರಾ.ಬೇಂದ್ರೆ : ಸಾಹಿತ್ಯದ ವಿರಾಟ ಸ್ವರೂಪ: ಪುಟ–52
7. ದ.ರಾ.ಬೇಂದ್ರೆ : ಅರಳುಮರಳು ಪುಟ–136
8. ದ.ರಾ.ಬೇಂದ್ರೆ : ಅರಳುಮರಳು ಪುಟ–138
9. ದ.ರಾ.ಬೇಂದ್ರೆ : ಅರಳುಮರಳು ಪುಟ–145
10. ದ.ರಾ.ಬೇಂದ್ರೆ : ಅರಳುಮರಳು ಪುಟ–147
11. ದ.ರಾ.ಬೇಂದ್ರೆ : ಅರಳುಮರಳು ಪುಟ–147
12. ದ.ರಾ.ಬೇಂದ್ರೆ : ಅರಳುಮರಳು ಪುಟ–148
13. ದ.ರಾ.ಬೇಂದ್ರೆ : ಅರಳುಮರಳು ಪುಟ–149
14. ದ.ರಾ.ಬೇಂದ್ರೆ : ಅರಳುಮರಳು ಪುಟ–149
15. ದ.ರಾ.ಬೇಂದ್ರೆ : ಅರಳುಮರಳು ಪುಟ–153
16. ದ.ರಾ.ಬೇಂದ್ರೆ : ಅರಳುಮರಳು ಪುಟ–155
17. ದ.ರಾ.ಬೇಂದ್ರೆ : ಅರಳುಮರಳು ಪುಟ–155
18. ದ.ರಾ.ಬೇಂದ್ರೆ : ಅರಳುಮರಳು ಪುಟ–146
19. ದ.ರಾ.ಬೇಂದ್ರೆ : ಅರಳುಮರಳು ಪುಟ–102

**ಸಮಾರೋಪ**

1. ಡಿ.ಆರ್.ನಾಗರಾಜ್ : ಶಕ್ತಿ ಶಾರದೆ0ಯು ಮೇಳ ಪುಟ 53,54
2. ಎಚ್.ಎಚ್. ರಾಘವೇಂದ್ರರಾವ್, ಹಾಡೆ ಹಾದಿಯ ತೋರಿತು. ಪುಟ 87

## ಪರಾಮರ್ಶನ ಗ್ರಂಥಗಳು


1. ಆಮೂರ.ಜಿ.ಎಸ್.: ದತ್ತಾತ್ರೇಯ ರಾಮಚಂದ್ರ ಬೇಂದ್ರೆ, ಸಾಹಿತ್ಯ ಅಕಾಡೆಮಿ, ನವದೆಹಲಿ–2000

2. ಆಮೂರ. ಜಿ.ಎಸ್. : ಭುವನದ ಭಾಗ್ಯ, ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು–1996

3. ಆಮೂರ. ಜಿ.ಎಸ್. (ಸಂ) : ಬೇಂದ್ರೆ ಕಾವ್ಯ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು–2003

4. ಡಾ॥ ಕೃಷ್ಣಕಟ್ಟಿ : ಬೇಂದ್ರೆ ಮತ್ತು ಕನ್ನಡ ಭಾವಗೀತದ ಸ್ವರೂಪ. ಕನ್ನಡ ವಿಶ್ವವಿದ್ಯಾಲಯ, ಹಂಪಿ–1996

5. ಡಾ॥ ಕೃಷ್ಣಪ್ಪ. ಜಿ.: ಬೇಂದ್ರೆಯವರ ಸಾಹಿತ್ಯದಲ್ಲಿ ಸ್ತ್ರೀ ಒಂದು ಅಧ್ಯಯನ : ಶ್ರೀರಂಗ ಪ್ರಕಾಶನ, ಮೈಸೂರು–2002.

6. ಕುವೆಂಪು : ಪಾಂಚಜನ್ಯ : ಕರ್ನಾಟಕ ಸಂಘ, ಶಿವಮೊಗ್ಗ–1933

7. ಕೀರ್ತಿನಾಥ ಕುರ್ತಕೋಟಿ : ಭೃಂಗದ ಬೆನ್ನೇರಿ, ಮನೋಹರ ಗ್ರಂಥಮಾಲಾ, ಧಾರವಾಡ–1975

8. ಕೀತಿನಾಥ ಕುರ್ತಕೋಟಿ : ಬಾರೋ ಸಾಧನಕೇರಿಗೆ, ಮನೋಹರ ಗ್ರಂಥಮಾಲಾ ಧಾರವಾಡ–1993

9. ಕೋ.ಚೆ. ಚೈತನ್ಯಮಯಿ ಶ್ರೀಮಾತಾ : ಕರ್ನಾಟಕ ನಿಲಯಂ ಟ್ರಸ್ಟ್, ಪಾಂಡಿಚೇರಿ–1988

10. ಗೋವಿಂದರಾಜು.ಸಿ.ಆರ್. : ಕರ್ನಾಟಕದ ಏಕೀಕರಣ ಚಳುವಳಿ ಮತ್ತು ಕನ್ನಡ ಸಾಹಿತ್ಯ, ಎಸ್,ಬಿ,ಎಸ್ ಪಬ್ಲಿಷರ್ಸ್ ಡಿಸ್ಟ್ರಿಬ್ಯೂಟರ್ಸ್, ಬೆಂಗಳೂರು–2000

11. ಗೋಪಾಲಕೃಷ್ಣ ಅಡಿಗ : ಭೂಮಿಗೀತ : ಶಾರದಾ ಪ್ರಕಟಣಾಲಯ, ಬೆಂಗಳೂರು–1959.

12. ಚುಳಕಿ ಗೋವಿಂದರಾಯರು [ಸಂ] : ಕವಿವಿವರ ಬೇಂದ್ರೆ : ಲಲಿತಾ ಸಾಹಿತ್ಯಮಾಲೆ, ಧಾರವಾಡ : 1946

13. ಚಂದ್ರಶೇಖರ : ಸಾಹಿತ್ಯ ಮತ್ತು ಚರಿತ್ರೆ : ನಮ್ಮ ಪ್ರಕಾಶನ ತಿಪಟೂರು–1999.

14. ನಾರಾಯಣಾಚಾರ್ಯ ಕೆ.ಎಸ್.ಬೇಂದ್ರೆ ಕಾವ್ಯದಲ್ಲಿ ಅಧ್ಯಾತ್ಮದ ನೆಲೆ ಮತ್ತು ಆರ್ಷದೃಷ್ಟಿ, ಶ್ರೀಮಾತಾ ಪ್ರಕಾಶನ, ಧಾರವಾಡ–1996

15. ಕೆ.ಎಸ್.ನರಸಿಂಹಸ್ವಾಮಿ : ಆಯ್ದಕವನಗಳು, ಕಾವ್ಯಾಲಯ ಪ್ರಕಾಶಕರು, ಮೈಸೂರು–1974

16. ಕೆ.ಎಸ್.ನರಸಿಂಹಸ್ವಾಮಿ : ಶಿಲಾಲತೆ , ಕಾವ್ಯಾಲಯ ಪ್ರಕಾಶಕರು : ಮೈಸೂರು–1977

17. ಡಿ.ಆರ್.ನಾಗರಾಜ್ : ಶಕ್ತಿ ಶಾರದೆಯ ಮೇಳ, ಅಕ್ಷರ ಪ್ರಕಾಶನ, ಹೆಗ್ಗೋಡು (ಸಾಗರ)–2002

18. ಡಾ॥ ಎಂ. ಬಸವಣ್ಣ : ಮೂಗನ ಮನೋ ವೈಜ್ಞಾನಿಕ ಸಿದ್ಧಾಂತಗಳು ಬೆಂಗಳೂರು ವಿಶ್ವವಿದ್ಯಾಲಯ: 1974

19. ಬಿ.ಎಂ.ಶ್ರೀ : ಇಂಗ್ಲೀಷ್ ಗೀತಗಳು : ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ , ಬೆಂಗಳೂರು.

20. ಡಾ॥ ಬುದ್ದಣ್ಣ ಹಿಂಗಮಿರೆ (ಸಂ) : ಇಳಿದು ಬಾತಾಯಿ, ಸಾಹಿತ್ಯ ಮಂಟಪ ಹುಬ್ಬಳ್ಳಿ ಹಾಗೂ ಸಮಾಜ ಪುಸ್ತಕಾಲಯ ಧಾರವಾಡ–1977

21. ಡಾ॥ ದ.ರಾ.ಬೇಂದ್ರೆ : ಸಾಹಿತ್ಯದ ವಿರಾಟ ಸ್ವರೂಪ : ಸಮಾಜ ಪುಸ್ತಕಾಲಯ, ಧಾರವಾಡ–1974

22. ಮಧುರ ಚೆನ್ನ : ನನ್ನನಲ್ಲ : ಕರ್ನಾಟಕ ಸಾಹಿತ್ಯ ಮಂದಿರ, ಧಾರವಾಡ–1933

23. ಎಚ್.ಎಸ್.ರಾಘವೇಂದ್ರ ರಾವ್ ; ಹಾಡೆ ಹಾದಿಯ ತೋರಿತು : ಕನ್ನಡ ಸಂಘ ಕ್ರೈಸ್ಟ್ ಕಾಲೇಜ್ ಬೆಂಗಳೂರು–1995.

24. ರುಕ್ಮಿಣಿ ಪಾರ್ವತಿ : ಅಂಬಿಕಾತನಯದತ್ತರ ಭಾವಗೀತೆಗಳು ಉಷಾ ಸಾಹಿತ್ಯಮಾಲೆ, ಮೈಸೂರು – 1982

25. ಪೊ.ಚಿ.ಶ್ರೀನಿವಾಸರಾಜು (ಸಂ) : ಬೇಂದ್ರೆ ಸಾಹಿತ್ಯ ಒಂದು ಅಧ್ಯಯನ, ಕನ್ನಡ ಸಂಘ ಕ್ರೈಸ್ಟ್ ಕಾಲೇಜ್, ಬೆಂಗಳೂರು–2000

26. ಜಿ.ಎಸ್.ಶಿವರುದ್ರಪ್ಪ : ಸಮಗ್ರಕಾವ್ಯ : ಸ್ನೇಹಪ್ರಕಾಶನ, ಬೆಂಗಳೂರು–1987

27. ಶ್ರೀನಿವಾಸ ಮೂರ್ತಿ.ಕಾವೆಂ. (1996) ಕನ್ನಡ ಸಾಹಿತ್ಯ ಮತ್ತು ಕರ್ನಾಟಕ ಸಾಹಿತ್ಯ ಆಕಾಡೆಮಿ, ಬೆಂಗಳೂರು.

28. ವಾಮನ ಬೇಂದ್ರೆ : ಬೇಂದ್ರೆ ಜೀವನ ಪರಿಚಯ : ಶ್ರೀಮಾತಾ ಪ್ರಕಾಶನ ಧಾರವಾಡ–1998

29. ವಾಮನ ಬೇಂದ್ರೆ. ಅಂಬಿಕಾತನಯದತ್ತರ ಸಮಗ್ರ ಕಾವ್ಯ ವಿಕಾಸ ಸಂಪುಟಗಳು. ಶ್ರೀಮಾತಾ ಪ್ರಕಾಶನ ಧಾರವಾಡ 2006

30. ಜಿ. ಹನುಮಂತರಾವ್ : ಋಗ್ವೇದ ಸೂಕ್ತಗಳು : ಕಾವ್ಯಾಲಯ ಪ್ರಕಾಶಕರು ಮೈಸೂರು : 1979